# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 30ನೇ ಸಂಚಿಕೆ ಕೊಪ್ಪ 21-2-1988 ಭಾನುವಾರ ಬೆಲೆ 50 ಪೈಸೆ


## ವಿದ್ಯುತ್ ಕಡಿತ ವಿರೋಧಿಸಿ ಜೇಸಿ ಧರಣಿ

ಬಾಳೆಹೊನ್ನೂರು : ಪಟ್ಟಣಗಳ ಫ್ಯಾನು, ಟಿ.ವಿ., ಫ್ರಿಜ್, ಏರ್ ಕಂಡೀಶನರ್‌ಗಳಿಗೆ ಇಲ್ಲವಾಗದ ವಿದ್ಯುತ್ತು ಹಳ್ಳಿಯ ರೈತರ ಪಂಪ್‌ಸೆಟ್‌ಗಳಿಗೆ ಮತ್ತು ಅವರ ಮಕ್ಕಳ ಓದಿಗೆ ಮಾತ್ರ ದಿನಕ್ಕೆ ಭರ್ತಿ 8 ಗಂಟೆಗಳ ಕಾಲ ಇಲ್ಲವಾಗುವ ಕ್ರೂರ ತಾರತಮ್ಯವನ್ನು ಸರಿಪಡಿಸುವಂತೆ ಒತ್ತಾಯಿಸಲು ಬಿಳಾಲುಕೊಪ್ಪದ ಮಾರುತಿ ಜೇಸೀಸ್ ಇಲ್ಲಿನ ವಿದ್ಯುಚ್ಛಕ್ತಿ ಮಂಡಳಿ ಕಛೇರಿಯೆದುರು 24 2 88ರಂದು ಪ್ರತಿಭಟನಾ ಧರಣಿ ಏರ್ಪಡಿಸಿದ್ದು, ವಿದ್ಯುಚ್ಛಕ್ತಿ ಕಡಿತದಿಂದ ತೊಂದರೆಗೊಳಗಾದವರೆಲ್ಲರೂ ಅಂದು ಬೆಳಿಗ್ಗೆ 10 ಗಂಟೆಗೆ ಬಿಳಾಲು ಇಲ್ಲಿನ ಪೆಟ್ರೋಲ್ ಬಂಕ್ ಬಳಿ ಸೇರಬೇಕೆಂದು ಕೋರಲಾಗಿದೆ.

### ಕೊಪ್ಪದಲ್ಲಿ ಹೆಚ್ಚಿದ ಕಳ್ಳರ ಹಾವಳಿ, ಒಬ್ಬನ ಸೆರೆ :

## ದೊಡ್ಡ ಕಳವುಗಳ ಪತ್ತೆ ಇನ್ನೂ ಇಲ್ಲ

ಕೊಪ್ಪ : ಫೆ 19ರ ರಾತ್ರಿ ಇಲ್ಲಿನ ಈಶ್ವರ ದೇವಸ್ಥಾನ ಮತ್ತು ಪಕ್ಕದ ಅಂಗಡಿಯ ಬೀಗ ಮುರಿದ ಕಳ್ಳನೊಬ್ಬನನ್ನು ರಾತ್ರಿ ಗಸ್ತಿನಲ್ಲಿದ್ದ ಪೋಲೀಸರು ಬಂಧಿಸಿ, ಆತನಿಂದ ದೇವಸ್ಥಾನದ ಕಾಣಿಕೆ ಡಬ್ಬಿ ಮುರಿದು ದೋಚಿದ್ದ 94 ರೂ.ಗಳನ್ನು ವಶಪಡಿಸಿಕೊಂಡಿದ್ದಾರೆ.

ಜಯಪುರದವನಾದ ಚಂದ್ರು ಯಾನೆ ಚಂದ್ರಶೇಖರ ಎಂಬ ಈತ ದುಡ್ಡು ಮಾತ್ರ ಹಾರಿಸುವವನಾಗಿದ್ದು, ಅಂಗಡಿಯಲ್ಲಿ ಬೀಡಿ, ಬೆಂಕಿಪೆಟ್ಟಿಗೆ ಬಂಡಲುಗಳನ್ನು ಮಾತ್ರ ಅಪಹರಿಸಿದ್ದ. ಹಣ ದಕ್ಕಿರಲಿಲ್ಲ

ಪೋಲೀಸರು ಭಾರತ್ ಮಿಲ್ ರಸ್ತೆಯಲ್ಲಿ ಬೀಟ್ ಹೋಗುವುದನ್ನು ನೋಡಿಕೊಂಡು ಈತ ತನ್ನ ಕೈಚಳಕ ಆರಂಭಿಸಿದ್ದ. ಆದರೆ ಈತ ಕೆಲಸ ಮುಗಿಸಿ ಹೊರಡುವ ಮೊದಲೇ ವಾಪಸು ಬಂದ ಪೋಲೀಸರು ಎರಡೂ ಕಡೆ ಬಾಗಿಲು ತೆರೆದಿರುವುದನ್ನು ಗಮನಿಸಿ ಪರಿಶೀಲಿಸಿದಾಗ ಈತ ಅಂಗಡಿಯೊಳಗೆ ಕಂಡು ಬಂದ. ಕರೆದು ವಿಚಾರಿಸಿದಾಗ ಮುರಿದ ಬೀಗ ಬಿಸಾಡಿ ಓಡತೊಡಗಿದವನನ್ನು ಪೋಲೀಸರು ಬೆಂಭತ್ತಿ ಹಿಡಿದರು.

ಹೆ! ಕಾ! ಪುಟ್ಟಮಲ್ಲೇಗೌಡ ಮತ್ತು ಕಾನ್ಸ್‌ಟೆಬಲ್‌ಗಳಾದ ಶಂಕರ್, ರಾಜಪ್ಪ, ನಂಜುಂಡಪ್ಪ ಮತ್ತು ಮಲ್ಲಿಕಾರ್ಜುನ ಇವರುಗಳೇ ಆರೋಪಿಯನ್ನು ಬಂಧಿಸಿದ ಪೋಲೀಸರು.

**ಮತ್ತೊಂದು ಪ್ರಕರಣ**

ಇದಾದ ನಂತರ ಶಂಕರ್ ಕಂಪೆನಿಯಲ್ಲಿ ರಾತ್ರಿ ಪಾಳಿ ಮುಗಿಸಿ ಹೋಗುತ್ತಿದ್ದ ಸದಾಶಿವ ಯಾನೆ ಜಗದೀಶ ಎಂಬ ಕಾರ್ಮಿಕನ ಚೀಲದಲ್ಲಿ ಬಸ್ ಟೈರಿನ ಟ್ಯೂಬೊಂದು ಪತ್ತೆಯಾದಾಗ ಆತನನ್ನೂ ಪೋಲೀಸರು ಬಂಧಿಸಿದರು.

ಹೆಡ್‌ಕಾನ್‌ಸ್ಟೇಬಲ್ ಲಕ್ಕೇಗೌಡ ಪ್ರಕರಣ ದಾಖಲು ಮಾಡಿಕೊಂಡು ಮುಂದಿನ ಕ್ರಮ ನಡೆಸುತ್ತಿದ್ದಾರೆ. ಈ ಮಧ್ಯೆ ಕಳೆದ ಎರಡು ವಾರಗಳಲ್ಲಿ, ಬಸ್ ಸ್ಟ್ಯಾಂಡ್ ಅಂಗಡಿಯೊಂದರಲ್ಲಿ ಹಾಗೂ ಪೆಟ್ರೋಲ್ ಬಂಕಿನ ಗೋಪಾಲ್ ಮನೆಯಲ್ಲಿ ನಡೆದ ಎರಡು ದೊಡ್ಡ ಕಳ್ಳತನಗಳ ಪತ್ತೆಗೆ ಪೋಲೀಸರು ತೀವ್ರವಾಗಿ ಪ್ರಯತ್ನಿಸುತ್ತಿದ್ದು, ಇನ್ನೂ ಯಾವುದೇ ಸುಳಿವು ಸಿಕ್ಕಿಲ್ಲ

ಅಂತೂ ಕಳೆದ ಮೂರ್ನಾಲ್ಕು ವಾರಗಳಿಂದ ಕಳ್ಳರ ಹಾವಳಿ ಇಲ್ಲಿನ ಪೋಲೀಸರ ಸಾಮರ್ಥ್ಯವನ್ನು ಮೀರಿ ಬೆಳೆದಿರುವಂತೆ ಕಂಡು ಬರುತ್ತಿದೆ. ಇದೇ ಸಮಯದಲ್ಲಿ ಇಲ್ಲಿನ ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ಕೂಡ ದೀರ್ಘ ರಜೆಯ ಮೇಲಿರುವುದು ನಾಗರಿಕರ ಆತಂಕವನ್ನು ಹತ್ತುಪಟ್ಟಾಗಿಸಿದೆ.

ದುರ್ಗಯ್ಯ ಹಗಲಾಗಲಿ ರಾತ್ರಿಯಾಗಲಿ ತಪ್ಪದೆ ಗಸ್ತು ತಿರುಗುತ್ತಿದ್ದುದು ಒಳ್ಳೆಯದಕ್ಕೋ ಕೆಟ್ಟದ್ದಕ್ಕೋ ಎಂಬುದನ್ನು ಈಗ ಜನ ತಾವೇ ನಿರ್ಣಯಿಸುವಂತಾಗಿದೆ.

## ಯುವತಿಯ ಕೈಡಿಸಲೆತ್ನಿಸಿದ ಕೇಡಿಗನ ಬಂಧನ

ಹರಿಹರಪುರ: ಇಲ್ಲಿಗೆ ಸಮೀಪದ ಕಗ್ಗದ ಅಂಗನವಾಡಿ ಶಿಕ್ಷಕಿಯ ಮಾನಭಂಗಕ್ಕೆ ಯತ್ನಿಸಿದ ಕೆಸವೆಯ ರವೀಂದ್ರ ಯಾನೆ ರವೀಂದ್ರ ಗೌಡ ಎಂಬವನನ್ನು ಇಲ್ಲಿನ ಠಾಣಾಧಿಕಾರಿ ಎಚ್.ಟಿ. ದುಗ್ಗಪ್ಪ ಬಂಧಿಸಿದ್ದು, ಆತನನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದೆ.

ಫೆ. 18ರ ಸಂಜೆ ಈ ಯುವತಿ ಕಾಡಿನ ದಾರಿಯಲ್ಲಿ ಹಿಂದಿರುಗುತ್ತಿದ್ದಾಗ ಈತ ಆಕೆಯನ್ನು ಎತ್ತಿಕೊಂಡು ಹೋಗಲೆತ್ನಿಸಿದೊಡನೆ ಆಕೆಯೂ, ಹಿಂದೆಯೇ ಬರುತ್ತಿದ್ದ ಸಹಾಯಕಿಯೂ (ಆಯಾ) ಬೊಬ್ಬೆ ಹೊಡೆದಿದ್ದರಿಂದ ಅಲ್ಲೇ ಬಿಟ್ಟು ಆತ ಪರಾರಿಯಾದ. ಆಕೆಯ ದೂರಿನ ಮೇರೆಗೆ ಮರುದಿನ ಕಾನ್ಸ್‌ಟೇಬಲ್ ಶುಕ್ರಪ್ಪ ಆತನನ್ನು ಚಾಣಾಕ್ಷತನದಿಂದ ಠಾಣೆಗೆ ಕರೆದೊಯ್ದು ಬಂಧಿಸಿದರು.

### ಆಹ್ವಾನ ಕ್ರಿಕೆಟ್ ಟೂರ್ನಿ

ಕೊಪ್ಪ: ಇಲ್ಲಿನ ಫ್ರೆಂಡ್ಸ್ ಕ್ರಿಕೆಟ್ ಅಸೋಸಿಯೇಶನ್ ಮತ್ತು ತೆಂಗಿನಮನೆಯ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಶನ್‌ಗಳ ಸಂಯುಕ್ತ ಆಶ್ರಯದಲ್ಲಿ ಮಾ. 3ರಿಂದ 9ರವರೆಗೆ ಇಲ್ಲಿ ಆಹ್ವಾನ ಕ್ರಿಕೆಟ್ ಟೂರ್ನಿ ಏರ್ಪಾಡಾಗಿದೆ.

### ನವೋದಯ ಶಾಲೆ ಪ್ರವೇಶ ಪರೀಕ್ಷೆಗೆ ಅರ್ಜಿ ಆಹ್ವಾನ

ಬಾಳೆಹೊನ್ನೂರು: ಇಲ್ಲಿಗೆ ಸಮೀಪದ ಕಾಫಿ ಸಂಶೋಧನಾ ಕೇಂದ್ರದಲ್ಲಿರುವ ನವೋದಯ ಶಾಲೆಯ 1988ನೇ ವರ್ಷದ 6ನೇ ತರಗತಿಯ ಪ್ರವೇಶಕ್ಕಾಗಿ ನಡೆಯುವ ಪರೀಕ್ಷೆಗಾಗಿ ತಾಲ್ಲೂಕಿನ ಸಹಾಯಕ ಶಿಕ್ಷಣಾಧಿಕಾರಿಗಳಿಗೆ ಅರ್ಜಿ ಸಲ್ಲಿಸಲು 29.2. 1988 ಕೊನೆಯ ದಿನವಾಗಿದೆ. ಪರೀಕ್ಷೆ ಆಯಾ ತಾ|| ಕೇಂದ್ರದಲ್ಲಿ 15.5.88ರ ಬೆಳಿಗ್ಗೆ 9.30 ಕ್ಕೆ ನಡೆಯುತ್ತದೆ

ಈಗ 5ನೇ ತರಗತಿಯಲ್ಲಿ ಓದುತ್ತಿರುವ ಮಕ್ಕಳೂ ಅರ್ಜಿ ಸಲ್ಲಿಸಬಹುದು. ತೇರ್ಗಡೆ ಆದವರು ಪರೀಕ್ಷೆಗೆ ಕೂರಲು ಅರ್ಹರಾಗುತ್ತಾರೆ. ವಯೋಮಿತಿ 1.5 88ಕ್ಕೆ 9ರಿಂದ 13 ವರ್ಷಗಳು.

### ಉದರದರ್ಶಕ ಶಸ್ತ್ರ ಚಿಕಿತ್ಸೆ ಶಿಬಿರ

ಶೃಂಗೇರಿ : ಮೆಣಸೆ ಮಂಡಲ ಪಂಚಾಯಿತಿ ಕಛೇರಿಯಲ್ಲಿ ಜ. 28ರಂದು ಪಂಚಾಯಿತಿ ಮತ್ತು ಕಂದಾಯ ಇಲಾಖೆಗಳ ಸಹಕಾರದೊಂದಿಗೆ ಆರೋಗ್ಯ ಇಲಾಖೆಯವರು ಉದರ ದರ್ಶಕ ಸಂತಾನ ಹರಣ ಶಸ್ತ್ರ ಚಿಕಿತ್ಸಾ ಶಿಬಿರವನ್ನು ನಡೆಸಿದರು. ಈ ಶಿಬಿರದಲ್ಲಿ ಪಾಲ್ಗೊಂಡಿದ್ದ 16 ಜನ ಅರ್ಹ ಮಹಿಳೆಯರಿಗೆ ತಜ್ಞವೈದ್ಯರಾದ ಡಾ|| ಅನಂತ ಪದ್ಮನಾಭ ಇವರು ಶಸ್ತ್ರ ಚಿಕಿತ್ಸೆಯನ್ನು ನೆರವೇರಿಸಿದರು.

ಈ ಮಹಿಳೆಯರಿಗೆ ಶೃಂಗೇರಿ ವಲಯ ಅರಣ್ಯಾಧಿಕಾರಿ ಸೈಯದ್ ಗಫಾರ್ ಪ್ರೋತ್ಸಾಹಕ ಕೊಡುಗೆಗಳನ್ನು ಹಾಗೂ ಮೆಣಸೆ ಮಂಡಲ ಪಂಚಾಯಿತಿ ವ್ಯಾಪ್ತಿಯ ಅರ್ಹ ಮಹಿಳೆಯರಿಗೆ ಪಂಚಾಯಿತಿ ವತಿಯಿಂದ ಸ್ಟೀಲ್ ತಟ್ಟೆಗಳನ್ನು ನೀಡಲಾಯಿತು.

### ಎಸ್ಸೆಸ್ಸೆಲ್ಸಿ ಅಭ್ಯರ್ಥಿಗಳಿಗೆ ಉಪಾಹಾರದ ವ್ಯವಸ್ಥೆ

ಹರಿಹರಪುರ : ಇಲ್ಲಿನ ರಾಷ್ಟ್ರೋತ್ಥಾನ ಬಳಗವು ಕಳೆದ ವರ್ಷದಂತೆ ಈ ವರ್ಷವೂ ಎಸ್ಸೆಸ್ಸೆಲ್ಸಿ ಪರೀಕ್ಷೆಯ ದಿನಗಳಂದು ಪರೀಕ್ಷಾರ್ಥಿಗಳಿಗೆ ಮಧ್ಯಾಹ್ನ ಲಘು ಉಪಾಹಾರದ ಏರ್ಪಾಡು ಮಾಡಿದೆ.

### ಅಡಿಕೆ ಧಾರಣೆ

**ಶಿವಮೊಗ್ಗ 19-2-1988**

ಸರಕು 3400 – 4285

ಬೆಟ್ಟೆ 2000 – 2750

ಗೊರಬಲು : 800 – 1150

### ಏಲಕ್ಕಿ ಧಾರಣೆ

**ಸಕಲೇಶಪುರ 19.2.1988**

ಸರಾಸರಿ : 140 - 145

**ಮಂಗಳೂರು 19.2.1988**

ಏಲಕ್ಕಿ : 120 - 150

## ಶಂಕರ್ ಸಾರಿಗೆ ಸಂಸ್ಥೆಯಲ್ಲಿ ಒಪ್ಪಂದ

**ಕೊಪ್ಪ: ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆಯಲ್ಲಿ ಎಐಟಿಯುಸಿ ನೇತೃತ್ವದ ಕಾರ್ಮಿಕ ಸಂಘ ಕಳೆದ ವರ್ಷ ಸಲ್ಲಿಸಿದ್ದ ಬೇಡಿಕೆ ಪಟ್ಟಿಯ ಕುರಿತು ಫೆ. 10ರಂದು ನಡೆದ ಅಂತಿಮ ಮಾತುಕತೆಯಲ್ಲಿ ಎಲ್ಲಾ ಪ್ರಮುಖ ಬೇಡಿಕೆಗಳ ಬಗ್ಗೆ ಒಪ್ಪಂದ ಏರ್ಪಟ್ಟಿದೆ.**

ಮೂಲ ವೇತನದ ಹೆಚ್ಚಳವೂ ಸೇರಿದಂತೆ ಹಲವಾರು ಅಂಶಗಳು ಒಡಂಬಡಿಕೆಯಲ್ಲಿ ಸೇರಿರುವುದಲ್ಲದೆ, ಹೆಚ್ಚಿದ ವೇತನ ಶ್ರೇಣಿಯನ್ನು 15 5 87 ರಿಂದಲೇ ಪೂರ್ವಾನ್ವಯಗೊಳಿಸಲು ಒಪ್ಪಲಾಗಿದೆ. ಒಪ್ಪಂದ 30.6.90ರಂದು ಕೊನೆಗೊಳ್ಳುತ್ತದೆ.

ಕಾರ್ಮಿಕರ ಜನವರಿ ತಿಂಗಳ ಸಂಬಳವನ್ನು ಹೊಸ ವೇತನ ಶ್ರೇಣಿಯಂತೆಯೇ ಪಾವತಿಸಲಾಗಿದೆ. ಪ್ರತಿಯೊಬ್ಬ ಕಾರ್ಮಿಕನಿಗೂ ತಿಂಗಳಿಗೆ ಕನಿಷ್ಠ 100 ರಿಂದ 130 ರೂ. ಗಳಷ್ಟು ವೇತನ ಹೆಚ್ಚಳವಾಗಿದೆ. ಏಳೂವರೆ ತಿಂಗಳ ವೇತನ ಬಾಕಿಯನ್ನು ಮಾ 7 ರೊಳಗೆ ಬಟವಾಡೆ ಮಾಡಲು ಆಡಳಿತ ವರ್ಗ ಒಪ್ಪಿದೆ

**ಕಿರುಕುಳ ಮುಂದುವರಿಕೆ**

ಇಷ್ಟಾದರೂ, ಮಾಲೀಕ ವರ್ಗದವರು ಕಾರ್ಮಿಕ ಸಂಘವನ್ನು ಮುರಿಯುವ ಸಲುವಾಗಿ, ಸಂಘದ ಸಕ್ರಿಯ ಕಾರ್ಯಕರ್ತರಿಗೆ ಅಥವಾ [illegible] ಸಂಘಕ್ಕೆ ಸೇರಲೊಪ್ಪದ ಕಾರ್ಮಿಕರಿಗೆ ಕಿರುಕುಳ ನೀಡುವುದನ್ನು ನಿಲ್ಲಿಸುವ ಬದಲು ಇನ್ನಷ್ಟು ತೀವ್ರಗೊಳಿಸಿದ್ದಾರೆಂದು ಕಾರ್ಮಿಕರು ಆಪಾದಿಸಿದ್ದಾರೆ.

ಹಲವಾರು ವರ್ಷಗಳಿಂದ [illegible] ಕಾರ್ಮಿಕರಾಗಿದ್ದು ಕಳೆದ ವರ್ಷ [illegible] ಮುಷ್ಕರದಿಂದ [illegible] ಕಾರ್ಮಿಕರೂ ಸೇರಿದಂತೆ [illegible] ಮುಂದಿಗೆ ವಿವಿಧ ನೆಪಗಳಲ್ಲಿ [illegible] ಮತ್ತು ವಜಾದ ನೋಟೀಸುಗಳನ್ನು ನೀಡುತ್ತಿರುವುದು ಕಾರ್ಮಿಕರಲ್ಲಿ ತೀವ್ರ [illegible] ಉಂಟುಮಾಡಿರುವುದು ಕಂಡು ಬರುತ್ತಿದೆ.

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

'MUNJAVU' Kannada Weekly. KOPPA - CHM. ಫೋನ್:114

6ನೇ ವರ್ಷ 30ನೇ ಸಂಚಿಕೆ ಕೊಪ್ಪ 21-2-1988 ಭಾನುವಾರ ಬೆಲೆ 50 ಪೈಸೆ

## ವಿದ್ಯುತ್ ಕಡಿತ ವಿರೋಧಿಸಿ ಜೇಸಿ ಧರಣಿ

ಬಾಳೆಹೊನ್ನೂರು : ಪಟ್ಟಣಗಳ ಫ್ಯಾನು, ಟಿ.ವಿ , ಫ್ರಿಜ್, ಏರ್ ಕಂಡೀಶನರ್‌ಗಳಿಗೆ ಇಲ್ಲವಾಗದ ವಿದ್ಯುತ್ತು ಹಳ್ಳಿಯ ರೈತರ ಪಂಪ್‌ಸೆಟ್‌ಗಳಿಗೆ ಮತ್ತು ಅವರ ಮಕ್ಕಳ ಓದಿಗೆ ಮಾತ್ರ ದಿನಕ್ಕೆ ಭರ್ತಿ 8 ಗಂಟೆಗಳ ಕಾಲ ಇಲ್ಲವಾಗುವ ಕ್ರೂರ ತಾರತಮ್ಯವನ್ನು ಸರಿಪಡಿಸುವಂತೆ ಒತ್ತಾಯಿಸಲು ಬಿಳಾಲುಕೊಪ್ಪದ ನೇರುಡಿ ಜೇಸೀಸ್ ಇಲ್ಲಿನ ವಿದ್ಯುಚ್ಛಕ್ತಿ ಮಂಡಳಿ ಕಛೇರಿಯೆದುರು 24.2.88ರಂದು ಪ್ರತಿಭಟನಾ ಧರಣಿ ಏರ್ಪಡಿಸಿದ್ದು, ವಿದ್ಯುಚ್ಛಕ್ತಿ ಕಡಿತದಿಂದ ತೊಂದರೆಗೊಳಗಾದವರೆಲ್ಲರೂ ಅಂದು ಬೆಳಿಗ್ಗೆ 10 ಗಂಟೆಗೆ ಸರಿಯಾಗಿ ಇಲ್ಲಿನ ಪೆಟ್ರೋಲ್ ಬಂಕ್ ಬಳಿ ಸೇರಬೇಕೆಂದು ಕೋರಲಾಗಿದೆ.

### ಉದರದರ್ಶಕ ಶಸ್ತ್ರ ಚಿಕಿತ್ಸೆ ಶಿಬಿರ

ಶೃಂಗೇರಿ : ಮೆಣಸೆ ಮಂಡಲ ಪಂಚಾಯಿತಿ ಕಛೇರಿಯಲ್ಲಿ ಜ. 28ರಂದು ಪಂಚಾಯಿತಿ ಮತ್ತು ಕಂದಾಯ ಇಲಾಖೆಗಳ ಸಹಕಾರದೊಂದಿಗೆ ಆರೋಗ್ಯ ಇಲಾಖೆಯವರು ಉದರ ದರ್ಶಕ ಸಂತಾನ ಹರಣ ಶಸ್ತ್ರ ಚಿಕಿತ್ಸಾ ಶಿಬಿರವನ್ನು ನಡೆಸಿದರು. ಈ ಶಿಬಿರದಲ್ಲಿ ಪಾಲ್ಗೊಂಡಿದ್ದ 16 ಜನ ಅರ್ಹ ಮಹಿಳೆಯರಿಗೆ ತಜ್ಞ ವೈದ್ಯರಾದ ಡಾ|| ಅನಂತ ಪದ್ಮನಾಭ ಇವರು ಶಸ್ತ್ರ ಚಿಕಿತ್ಸೆಯನ್ನು ನೆರವೇರಿಸಿದರು.

ಈ ಮಹಿಳೆಯರಿಗೆ ಶೃಂಗೇರಿ ವಲಯ ಅರಣ್ಯಾಧಿಕಾರಿ ಸೈಯದ್ ಗಫಾರ್ ಪ್ರೋತ್ಸಾಹಕ ಕೊಡುಗೆಗಳನ್ನು ಹಾಗೂ ಮೆಣಸೆ ಮಂಡಲ ಪಂಚಾಯಿತಿ ವ್ಯಾಪ್ತಿಯ ಅರ್ಹ ಮಹಿಳೆಯರಿಗೆ ಪಂಚಾಯಿತಿ ವತಿಯಿಂದ ಸ್ಟೀಲ್ ತಟ್ಟೆಗಳನ್ನು ನೀಡಲಾಯಿತು.

### ಎಸ್ಸೆಸ್ಸೆಲ್ಸಿ ಅಭ್ಯರ್ಥಿಗಳಿಗೆ ಉಪಾಹಾರದ ವ್ಯವಸ್ಥೆ

ಹರಿಹರಪುರ : ಇಲ್ಲಿನ ರಾಷ್ಟ್ರೋತ್ಥಾನ ಬಳಗವು ಕಳೆದ ವರ್ಷದಂತೆ ಈ ವರ್ಷವೂ ಎಸ್ಸೆಸ್ಸೆಲ್ಸಿ ಪರೀಕ್ಷೆಯ ದಿನಗಳಂದು ಪರೀಕ್ಷಾರ್ಥಿಗಳಿಗೆ ಮಧ್ಯಾಹ್ನ ಲಘು ಉಪಾಹಾರದ ಏರ್ಪಾಡು ಮಾಡಿದೆ.

### ಅಡಿಕೆ ಧಾರಣೆ

ಶಿವಮೊಗ್ಗ 19-2-1988

ಸರಕು 3400 – 4285

ಬೆಟ್ಟೆ 2000 – 2750

ಗೊರಬಲು : 800 – 1150

### ಏಲಕ್ಕಿ ಧಾರಣೆ

ಸಕಲೇಶಪುರ 19.2.1988

ಸರಾಸರಿ : 140 - 145

ಮಂಗಳೂರು 19.2.1988

ಏಲಕ್ಕಿ : 120 – 150

ಕೊಪ್ಪದಲ್ಲಿ ಹೆಚ್ಚಿದ ಕಳ್ಳರ ಹಾವಳಿ, ಒಬ್ಬನ ಸೆರೆ :

# ದೊಡ್ಡ ಕಳವುಗಳ ಪತ್ತೆ ಇನ್ನೂ ಇಲ್ಲ

ಕೊಪ್ಪ : ಫೆ 19ರ ರಾತ್ರಿ ಇಲ್ಲಿನ ಈಶ್ವರ ದೇವಸ್ಥಾನ ಮತ್ತು ಪಕ್ಕದ ಅಂಗಡಿಯ ಬೀಗ ಮುರಿದ ಕಳ್ಳನೊಬ್ಬನನ್ನು ರಾತ್ರಿ ಗಸ್ತಿನಲ್ಲಿದ್ದ ಪೋಲೀಸರು ಬಂಧಿಸಿ, ಆತನಿಂದ ದೇವಸ್ಥಾನದ ಕಾಣಿಕೆ ಡಬ್ಬಿ ಮುರಿದು ದೋಚಿದ್ದ 94 ರೂ.ಗಳನ್ನು ವಶಪಡಿಸಿಕೊಂಡಿದ್ದಾರೆ.

ಜಯಪುರದವನಾದ ಚಂದ್ರು ಯಾನೆ ಚಂದ್ರಶೇಖರ ಎಂಬ ಈತ ದುಡ್ಡು ಮಾತ್ರ ಹಾರಿಸುವವನಾಗಿದ್ದು, ಅಂಗಡಿಯಲ್ಲಿ ಬೀಡಿ, ಬೆಂಕಿಪೆಟ್ಟಿಗೆ ಬಂಡಲುಗಳನ್ನು ಮಾತ್ರ ಅಪಹರಿಸಿದ್ದ. ಹಣ ದಕ್ಕಿರಲಿಲ್ಲ

ಪೋಲೀಸರು ಭಾರತ್ ಮಿಲ್ ರಸ್ತೆಯಲ್ಲಿ ಬೀಟ್ ಹೋಗುವುದನ್ನು ನೋಡಿಕೊಂಡು ಈತ ತನ್ನ ಕೈಚಳಕ ಆರಂಭಿಸಿದ್ದ. ಆದರೆ ಈತ ಕೆಲಸ ಮುಗಿಸಿ ಹೊರಡುವ ಮೊದಲೇ ವಾಪಸು ಬಂದ ಪೋಲೀಸರು ಎರಡೂ ಕಡೆ ಬಾಗಿಲು ತೆರೆದಿರುವುದನ್ನು ಗಮನಿಸಿ ಪರಿಶೀಲಿಸಿದಾಗ ಈತ ಅಂಗಡಿಯೊಳಗೆ ಕಂಡು ಬಂದ. ಕರೆದು ವಿಚಾರಿಸಿದಾಗ ಮುರಿದ ಬೀಗ ಬಿಸಾಡಿ ಓಡತೊಡಗಿದವನನ್ನು ಪೋಲೀಸರು ಬೆಂಬತ್ತಿ ಹಿಡಿದರು.

ಹೆ! ಕಾ! ಪುಟ್ಟಮಲ್ಲೇಗೌಡ ಮತ್ತು ಕಾನ್‌ಸ್ಟೆಬಲ್‌ಗಳಾದ ಶಂಕರ್, ರಾಜಪ್ಪ, ನಂಜುಂಡಪ್ಪ ಮತ್ತು ಮಲ್ಲಿಕಾರ್ಜುನ ಇವರುಗಳೇ ಆರೋಪಿಯನ್ನು ಬಂಧಿಸಿದ ಪೋಲೀಸರು.

### ಮತ್ತೊಂದು ಪ್ರಕರಣ

ಇದಾದ ನಂತರ ಶಂಕರ್ ಕಂಪೆನಿಯಲ್ಲಿ ರಾತ್ರಿ ಪಾಳಿ ಮುಗಿಸಿ ಹೋಗುತ್ತಿದ್ದ ಸದಾಶಿವ ಯಾನೆ ಜಗದೀಶ ಎಂಬ ಕಾರ್ಮಿಕನ ಚೀಲದಲ್ಲಿ ಬಸ್ ಟೈರಿನ ಟ್ಯೂಬೊಂದು ಪತ್ತೆಯಾದಾಗ ಆತನನ್ನೂ ಪೋಲೀಸರು ಬಂಧಿಸಿದರು.

ಹೆಡ್‌ಕಾನ್‌ಸ್ಟೆಬಲ್ ಲಕ್ಕೇಗೌಡ ಪ್ರಕರಣ ದಾಖಲು ಮಾಡಿಕೊಂಡು ಮುಂದಿನ ಕ್ರಮ ನಡೆಸುತ್ತಿದ್ದಾರೆ. ಈ ಮಧ್ಯೆ ಕಳೆದ ಎರಡು ವಾರಗಳಲ್ಲಿ, ಬಸ್ ಸ್ಟ್ಯಾಂಡ್ ಅಂಗಡಿಯೊಂದರಲ್ಲಿ ಹಾಗೂ ಪೆಟ್ರೋಲ್ ಬಂಕಿನ ಗೋಪಾಲ್ ಮನೆಯಲ್ಲಿ ನಡೆದ ಎರಡು ದೊಡ್ಡ ಕಳ್ಳತನಗಳ ಪತ್ತೆಗೆ ಪೋಲೀಸರು ತೀವ್ರವಾಗಿ ಪ್ರಯತ್ನಿಸುತ್ತಿದ್ದು, ಇನ್ನೂ ಯಾವುದೇ ಸುಳಿವು ಸಿಕ್ಕಿಲ್ಲ

ಅಂತೂ ಕಳೆದ ಮೂರ್‍ನಾಲ್ಕು ವಾರಗಳಿಂದ ಕಳ್ಳರ ಹಾವಳಿ ಇಲ್ಲಿನ ಪೋಲೀಸರ ಸಾಮರ್ಥ್ಯವನ್ನು ಮೀರಿ ಬೆಳೆದಿರುವಂತೆ ಕಂಡು ಬರುತ್ತಿದೆ. ಇದೇ ಸಮಯದಲ್ಲಿ ಇಲ್ಲಿನ ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ಕೂಡ ದೀರ್ಘ ರಜೆಯ ಮೇಲಿರುವುದು ನಾಗರಿಕರ ಆತಂಕವನ್ನು ಹೆಚ್ಚು ಪಟ್ಟು ಗೊಳಿಸಿದೆ.

ದುರ್ಗಯ್ಯ ಹಗಲಾಗಲಿ ರಾತ್ರಿಯಾಗಲಿ ತಪ್ಪದೆ ಗಸ್ತು ತಿರುಗುತ್ತಿದ್ದುದು ಒಳ್ಳೆಯದಕ್ಕೋ ಕೆಟ್ಟದ್ದಕ್ಕೋ ಎಂಬುದನ್ನು ಈಗ ಜನ ತಾವೇ ನಿರ್ಣಯಿಸುವಂತಾಗಿದೆ.

## ಯುವತಿಯ ಕೆಡಿಸಲೆತ್ನಿಸಿದ ಕೇಡಿಗನ ಬಂಧನ

ಹರಿಹರಪುರ: ಇಲ್ಲಿಗೆ ಸಮೀಪದ ಕಗ್ಗದ ಅಂಗನವಾಡಿ ಶಿಕ್ಷಕಿಯ ಮಾನಭಂಗಕ್ಕೆ ಯತ್ನಿಸಿದ ಕೆಸವೆಯ ರವೀಂದ್ರ ಯಾನೆ ರವೀಂದ್ರ ಗೌಡ ಎಂಬವನನ್ನು ಇಲ್ಲಿನ ಠಾಣಾಧಿಕಾರಿ ಎಚ್.ಟಿ. ದುಗ್ಗಪ್ಪ ಬಂಧಿಸಿದ್ದು, ಆತನನ್ನು ನ್ಯಾಯಾಂಗ ಬಂಧನಕ್ಕೊಳಪಡಿಸಲಾಗಿದೆ.

ಫೆ. 18ರ ಸಂಜೆ ಈ ಯುವತಿ ಕಾಡಿನ ದಾರಿಯಲ್ಲಿ ಹಿಂದಿರುಗುತ್ತಿದ್ದಾಗ ಈತ ಆಕೆಯನ್ನು ಎತ್ತಿಕೊಂಡು ಹೋಗಲೆತ್ನಿಸಿದೊಡನೆ ಆಕೆಯೂ, ಹಿಂದೆಯೇ ಬರುತ್ತಿದ್ದ ಸಹಾಯಕಿಯೂ (ಆಯಾ) ಬೊಬ್ಬೆ ಹೊಡೆದಿದ್ದರಿಂದ ಅಲ್ಲೇ ಬಿಟ್ಟು ಆತ ಪರಾರಿಯಾದ. ಆಕೆಯ ದೂರಿನ ಮೇರೆಗೆ ಮರುದಿನ ಕಾನ್‌ಸ್ಟೇಬಲ್ ತುಕ್ರಪ್ಪ ಆತನನ್ನು ಚಾಣಾಕ್ಷತನದಿಂದ ಠಾಣೆಗೆ ಕರೆದೊಯ್ದು ಬಂಧಿಸಿದರು.

### ಆಹ್ವಾನ ಕ್ರಿಕೆಟ್ ಟೂರ್ನಿ

ಕೊಪ್ಪ: ಇಲ್ಲಿನ ಫ್ರೆಂಡ್ಸ್ ಕ್ರಿಕೆಟ್ ಅಸೋಸಿಯೇಶನ್ ಮತ್ತು ತೆಂಗಿನಮನೆಯ ಸ್ಟಾರ್ ಸ್ಪೋರ್ಟ್ಸ್ ಅಸೋಸಿಯೇಶನ್‌ಗಳ ಸಂಯುಕ್ತ ಆಶ್ರಯದಲ್ಲಿ ಮಾ. 3ರಿಂದ 9ರವರೆಗೆ ಇಲ್ಲಿ ಆಹ್ವಾನ ಕ್ರಿಕೆಟ್ ಟೂರ್ನಿ ಏರ್ಪಾಡಾಗಿದೆ.

### ನವೋದಯ ಶಾಲೆ ಪ್ರವೇಶ ಪರೀಕ್ಷೆಗೆ ಅರ್ಜಿ ಆಹ್ವಾನ

ಬಾಳೆಹೊನ್ನೂರು: ಇಲ್ಲಿಗೆ ಸಮೀಪದ ಕಾಫಿ ಸಂಶೋಧನಾ ಕೇಂದ್ರದಲ್ಲಿರುವ ನವೋದಯ ಶಾಲೆಯ 1988ನೇ ವರ್ಷದ 6ನೇ ತರಗತಿಯ ಪ್ರವೇಶಕ್ಕಾಗಿ ನಡೆಯುವ ಪರೀಕ್ಷೆಗಾಗಿ ತಾಲ್ಲೂಕಿನ ಸಹಾಯಕ ಶಿಕ್ಷಣಾಧಿಕಾರಿಗಳಿಗೆ ಅರ್ಜಿ ಸಲ್ಲಿಸಲು 29.2.1988 ಕೊನೆಯ ದಿನವಾಗಿದೆ. ಪರೀಕ್ಷೆ ಆಯಾ ತಾ|| ಕೇಂದ್ರದಲ್ಲಿ 15.5.88ರ ಬೆಳಿಗ್ಗೆ 9.30 ಕ್ಕೆ ನಡೆಯುತ್ತದೆ

ಈಗ 5ನೇ ತರಗತಿಯಲ್ಲಿ ಓದುತ್ತಿರುವ ಮಕ್ಕಳೂ ಅರ್ಜಿ ಸಲ್ಲಿಸಬಹುದು. ತೇರ್ಗಡೆ ಆದವರು ಪರೀಕ್ಷೆಗೆ ಕೂರಲು ಅರ್ಹರಾಗುತ್ತಾರೆ. ವಯೋಮಿತಿ 1.5.88ಕ್ಕೆ 9ರಿಂದ 13 ವರ್ಷಗಳು.

## ಶಂಕರ್ ಸಾರಿಗೆ ಸಂಸ್ಥೆಯಲ್ಲಿ ಒಪ್ಪಂದ

ಕೊಪ್ಪ: ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆಯಲ್ಲಿ ಎಐಟಿಯುಸಿ ನೇತೃತ್ವದ ಕಾರ್ಮಿಕ ಸಂಘ ಕಳೆದ ವರ್ಷ ಸಲ್ಲಿಸಿದ್ದ ಬೇಡಿಕೆ ಪಟ್ಟಿಯ ಕುರಿತು ಫೆ 10ರಂದು ನಡೆದ ಅಂತಿಮ ಮಾತುಕತೆಯಲ್ಲಿ ಎಲ್ಲಾ ಪ್ರಮುಖ ಬೇಡಿಕೆಗಳ ಬಗ್ಗೆ ಒಪ್ಪಂದ ಏರ್ಪಟ್ಟಿದೆ.

ಮೂಲ ವೇತನದ ಹೆಚ್ಚಳವೂ ಸೇರಿದಂತೆ ಹಲವಾರು ಅಂಶಗಳು ಒಡಂಬಡಿಕೆಯಲ್ಲಿ ಸೇರಿರುವುದಲ್ಲದೆ, ಹೆಚ್ಚಿದ ವೇತನ ಶ್ರೇಣಿಯನ್ನು 15.5.87 ರಿಂದಲೇ ಪೂರ್ವಾನ್ವಯಗೊಳಿಸಲು ಒಪ್ಪಲಾಗಿದೆ. ಒಪ್ಪಂದ 30.6.90ರಂದು ಕೊನೆಗೊಳ್ಳುತ್ತದೆ.

ಕಾರ್ಮಿಕರ ಜನವರಿ ತಿಂಗಳ ಸಂಬಳವನ್ನು ಹೊಸ ವೇತನ ಶ್ರೇಣಿಯಂತೆಯೇ ಪಾವತಿಸಲಾಗಿದೆ. ಪ್ರತಿಯೊಬ್ಬ ಕಾರ್ಮಿಕನಿಗೂ ತಿಂಗಳಿಗೆ ಕನಿಷ್ಠ 100 ರಿಂದ 130 ರೂ. ಗಳಷ್ಟು ವೇತನ ಹೆಚ್ಚಳವಾಗಿದೆ. ಫೆಬ್ರವರಿ ತಿಂಗಳ ವೇತನ ಬಾಕಿಯನ್ನು ಮಾ 7 ರೊಳಗೆ ಬಟವಾಡೆ ಮಾಡಲು ಆಡಳಿತ ವರ್ಗ ಒಪ್ಪಿದೆ

### ಕಿರುಕುಳ ಮುಂದುವರಿಕೆ

ಇಷ್ಟಾದರೂ, ಮಾಲೀಕ ವರ್ಗದವರು ಕಾರ್ಮಿಕ ಸಂಘವನ್ನು ಮುರಿಯುವ ಸಲುವಾಗಿ, ಸಂಘದ ಸಕ್ರಿಯ ಕಾರ್ಯಕರ್ತರಿಗೆ ಅಥವಾ ಚಮಚಾ ಸಂಘಕ್ಕೆ ಸೇರದೊಪ್ಪದ ಕಾರ್ಮಿಕರಿಗೆ ಕಿರುಕುಳ ನೀಡುವುದನ್ನು ನಿಲ್ಲಿಸುವ ಬದಲು ಇನ್ನಷ್ಟು ತೀವ್ರಗೊಳಿಸಿದ್ದಾರೆಂದು ಕಾರ್ಮಿಕರು ಆಪಾದಿಸಿದ್ದಾರೆ.

ಹಲವಾರು ವರ್ಷಗಳಿಂದ ಖಾಯಂ ಕಾರ್ಮಿಕರಾಗಿದ್ದು [illegible] ಮುಂದಿಗೆ [illegible] ಮತ್ತು [illegible] ಕಾರ್ಮಿಕರಲ್ಲಿ ತೀವ್ರ [illegible]

# ಮಲ ತಿನ್ನಿಸಿದ ಕೃತ್ಯ: ಕೆಲ ಪ್ರತಿಕ್ರಿಯೆಗಳು

## "ಅವರಂಗಗಳ ಗಂಗಳಗಳಲ್ಲೆಲ್ಲ ಹೇಲೇ ಇರುವುದಾದರೆ...."

ಮಾನ್ಯರೆ,

ಬೆಂಡಿಗೇರಿ ಪ್ರಕರಣ ಜರುಗಿ ಇತಿಹಾಸದ ಕೋಣೆ ಹೊಕ್ಕ ಮರುಘಳಿಗೆಯಲ್ಲೇ ಮತ್ತೊಂದು ಅಂತಹದ್ದೇ ಘೋರವಾದ ಕೃತ್ಯವು ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ದಟ್ಟ ಹಸಿರು ಸಿರಿಯ ಹಾದಿಯಲ್ಲಿ ಹಾದು ಬಂದು ಚರಿತ್ರೆಯ ಕದವನ್ನು ತೆರೆದು ಒಳನುಗ್ಗಿ ಎರಡನೇ ದಾಖಲೆಯ ಸ್ಥಳಾವಕಾಶ ಮಾಡಿಕೊಂಡಿದೆ.

ಸೊರಬದ ತತ್ತೂರು ಎಂಬ ಹಳ್ಳಿಯಲ್ಲಿ ಚಂದ್ರಪ್ಪ ಎಂಬ ದಲಿತನು ಊರಿಗೆಲ್ಲರಿಗೂ ಸೇರಿದ ಹನುಮಂತ ದೇವರಿಗೆ ಪೂಜೆ ಸಲ್ಲಿಸಲು ಪೂಜಾ ಸಾಮಾನುಗಳೊಂದಿಗೆ ಹೆಂಡತಿಯನ್ನು ಕಳಿಸಿದನು. ಆದರೆ ಪೂಜಾರಿಯು ಪೂಜೆ ಮಾಡಿಕೊಡುವುದಿಲ್ಲ ಎಂದು ತಿರಸ್ಕರಿಸಿದ. ಇಂತಹ ಹಲ್ಕತನದ ವಿರುದ್ಧ ರೊಚ್ಚಿಗೆದ್ದ ಚಂದ್ರಪ್ಪನು ಪೂಜೆ ಮಾಡಿಕೊಡಲೇಬೇಕೆಂದು ಹಟ ಹಿಡಿದಾಗ ಆತನಿಗೆ ದೊರೆತ ಪ್ರತಿಫಲ ಹೊಡೆತ.... ಬಡಿತ, ದರದರನೆ ಎಳೆದಾಡಿಯೂ ಅಲ್ಲದೆ ಮೆಟ್ಟಿಗೆ ಹೇಲು ಮೆತ್ತಿ ಬಾಯಿಗೆ ತುರುಕಿದ್ದು. ಇದು ಅತಿ ಕ್ರೌರ್ಯದ, ಅತ್ಯಂತ ಕೀಳುತನದ ರಕ್ಕಸ ಪ್ರವೃತ್ತಿಯಾಗಿದೆ.

ರಾಮಕೃಷ್ಣ ಹೆಗಡೆಯವರ ನಾಯಕತ್ವದ ಜನತಾ ಸರ್ಕಾರದಲ್ಲಿ, ನಜೀರ್ ಸಾಹೇಬರ ಜಿಲ್ಲಾ ಪರಿಷತ್ ಮತ್ತು ಮಂಡಲ್ ರಾಜ್ಯದ ದರ್ಬಾರುದಾರರೆಲ್ಲರು ತಾವು ಹೇಲು ತಿಂದು ಆ ಮನಸ್ಸಿನಿಂದಲೇ ಅನಾಯಕ, ಅಶಕ್ತ ದಲಿತರಿಗೆ ಹೇಲು ತಿನ್ನಿಸುವಂತಹ 'ಪ್ರಗತಿದಾಯಕವಾದ' ಕಾರ್ಯಕ್ರಮಗಳನ್ನು ರೂಪಿಸುತ್ತ ಇರುವುದನ್ನು ಬಿಟ್ಟರೆ ಮತ್ಯಾವ ಕೆಲಸ ಕಾರ್ಯಗಳಿಲ್ಲವೇನೋ....? ಎನ್ನಿಸುತ್ತಿದೆ.

ಇವತ್ತಿನ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿ, ಬಸವಣ್ಣ, ಅಂಬೇಡ್ಕರ್‌ರಂತಹ ಮಹಾನ್ ವ್ಯಕ್ತಿಗಳು ಜೀವಂತವಾಗಿದ್ದಿದ್ದರೆ ಏನು ಮಾಡುತ್ತಿದ್ದರು? ಏನು ಮಾಡಿಕೊಳ್ಳುತ್ತಿದ್ದರು....? ಊಹಿಸಲಾಗುತ್ತದೆಯೆ? ಮಹಾತ್ಮಾ ಗಾಂಧಿಯವರ ರಾಮರಾಜ್ಯದ ಕನಸಿನಲ್ಲಿ ತೂಕಡಿಸುತ್ತಿರುವ ರಾಜ್ಯ ಸರ್ಕಾರದ ಚುಕ್ಕಾಣಿ ಹಿಡಿದಿರುವ ಜನತಾ ಪಕ್ಷದ ನಾಯಕ ಮಣಿಗಳ ಮನಸ್ಸು, ಬಾಯಿಗಳಲ್ಲಿ, ಅವರ ಅಂಗಳ ಗಂಗಳಗಳಲ್ಲೆಲ್ಲ.... ಹೇಲೇ ಇರುವುದಾದರೆ, ಇಂತಹ ಅಸಹ್ಯ ಕೃತ್ಯಗಳು ದಲಿತ ಇತಿಹಾಸದ ಕಾಲಚಕ್ರದಲ್ಲೂ ಸೇರಿ ಮುಂದುವರಿಯುತ್ತಲೇ ಇರಲಿ.

ತಮಿಳು ನಾಡಿನ ಮೀನಾಕ್ಷಿಪುರಂನಲ್ಲಿ ದಲಿತರು ಮುಸ್ಲಿಂ ಧರ್ಮಕ್ಕೆ ಸಾರ್ವತ್ರಿಕವಾಗಿ ಮತಾಂತರ ಹೊಂದಿದಾಗ ತತ್ತರಿಸಿದ ಹಿಂದೂ ಧರ್ಮದ ಗುತ್ತಿಗೆದಾರರು ಹುಚ್ಚೆದ್ದು ಕರ್ನಾಟಕದ ಮೂಲೆ ಮೂಲೆಯಲ್ಲಿರುವ ಕೊಳೆಗೇರಿಗಳಿಗೆಲ್ಲಕ್ಕೂ ಧಾವಿಸಿ ಬಂದು ಸಭೆ ಸಮಾರಂಭ ನಡೆಸಿ ಕೊಳಕು ಕೈಗಳಿಂದಲೇ ನೀಡಿದ ನೀರೂ ಹಾಲೂ ಕುಡಿದು ಹೊರಟು ಹೋದದ್ದು ನಾಟಕವೆ?

ಈ ನಾಡಿನಲ್ಲಿ ದಲಿತರ ಮೇಲೆ ನಿರಂತರವಾಗಿ ಅತ್ಯಾಚಾರ, ಹಲ್ಲೆ, ಬಹಿಷ್ಕಾರಗಳು ಮುಂತಾದ ಅಮಾನವೀಯ ಬರ್ಬರತೆಯ ದುಷ್ಕೃತ್ಯಗಳು ಕಣ್ಣೆದುರಿನಲ್ಲೇ ನಡೆಯುತ್ತಿದ್ದರೂ, ಕಂಡೂ ಕಾಣದಂತೆ ಬಾಯಿ

(3ನೇ ಪುಟಕ್ಕೆ)

## "ದೌರ್ಜನ್ಯಖೋರರ ಆಸ್ತಿ ಪಾಸ್ತಿ ಮುಟ್ಟುಗೋಲು ಹಾಕಬೇಕು"

ಮಾನ್ಯರೆ,

ಬೆಂಡಿಗೇರಿ ಮತ್ತು ತತ್ತೂರುಗಳಲ್ಲಿ ನಡೆದ ಮಲ ತಿನ್ನಿಸಿದ ಪ್ರಕರಣಗಳಿಂದ ಮನುಷ್ಯರಾದವರು ತಲೆ ತಗ್ಗಿಸಬೇಕಾಗಿದೆ. ಇವು ನಮ್ಮ ಸಮಾಜ ಸತ್ತುಹೋಗಿದೆ ಎಂಬುದರ ಗುರುತಾಗಿವೆ. ಜಾತಿ ವ್ಯವಸ್ಥೆ ಹುಟ್ಟಿ ಬೆಳೆಯಲು ತೊಡಗಿದಾಗಿನಿಂದಲೇ ಈ ಸಮಾಜ ಸಾಯಲು ತೊಡಗಿದ್ದು.

ದಲಿತರ ಮೇಲೆ ಹಲ್ಲೆ ನಡೆಸುವವರು ಬಹುತೇಕ ಜಮೀನುದಾರಿ ವರ್ಗಕ್ಕೆ ಸೇರಿದ ರಾಕ್ಷಸರು. ಹಳ್ಳಿಗಳಲ್ಲಿ ಸಾಮಾನ್ಯವಾಗಿ ದಲಿತರಿಗೆ ಹೊಲ-ಮನೆ ಇಲ್ಲದಿರುವುದರಿಂದ ಅವರಿಗೆ ಆರ್ಥಿಕ ಬಲವಾಗಲೀ ಸಾಮಾಜಿಕ ಶಕ್ತಿಯಾಗಲೀ ಇಲ್ಲದಿರುವುದರಿಂದ ಅವರ ಮೇಲೆ ಬಹಳ ಸುಲಭವಾಗಿ ಅತ್ಯಾಚಾರ, ವ್ಯಭಿಚಾರಗಳು ನಡೆಯುತ್ತಿವೆ.

ದಲಿತರ ಮೇಲೆ, ಅಸ್ಪೃಶ್ಯರ ಮೇಲೆ ದೌರ್ಜನ್ಯ ನಡೆಸುವ ಜನರಿಗೆ ಉಗ್ರ ಶಿಕ್ಷೆಯಾಗಬೇಕೆನ್ನುವುದು ನಾಗರೀಕ ನಿಲುವು. ಆದರೆ ಮಲವನ್ನು ತಿನ್ನಿಸುವ ಜನ ಮಲವನ್ನೂ ತಿಂದಾರು, ಅದು ಅಂಥ ಕಠಿಣ ಕ್ರಮವಾಗಲಾರದೇನೋ! ಗಡಿಪಾರಾದರೆ ಅದರಿಂದಲೂ ಹೇಗೆ ನುಸುಳಿಕೊಳ್ಳಬಹುದೆಂದು ಜನರಿಗೆ ಗೊತ್ತು. ಆದ್ದರಿಂದ, ಅದಕ್ಕಿಂತ ಅತ್ಯುಗ್ರ ಕ್ರಮವೆಂದರೆ ಮಲ ತಿನ್ನಿಸಿದ ಜನರ ಆಸ್ತಿಪಾಸ್ತಿಯನ್ನು ಸಂಪೂರ್ಣವಾಗಿ ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುವುದು. ಇದೊಂದೇ ದಲಿತರ ಮೇಲೆ ನಡೆಯುವ ದುಷ್ಕರ್ಮಗಳನ್ನು ತಡೆಗಟ್ಟಲು ಇರುವ ಸೂಕ್ತ ಮಾರ್ಗ, ಅತ್ಯಂತ ಪರಿಣಾಮಕಾರಿಯಾದ ಮಾರ್ಗ.

ಆಸ್ತಿಯ ಹಕ್ಕನ್ನು ಸಂವಿಧಾನ ನೀಡಿದೆ ನಿಜ. ಆಸ್ತಿಯ ಹಕ್ಕು ಮನುಷ್ಯನ ಬದುಕು ನಡೆಯಲು ಕೊಟ್ಟಿರುವ ಊರೆಗೋಲು. ಆದರೆ ಅವನು ಈ ಊರೆಗೋಲಿನಿಂದ ಬಡಬಗ್ಗರನ್ನು ಬಡಿಯುತ್ತಿದ್ದಾನೆ. ಆದ್ದರಿಂದ ದುರುಪಯೋಗವಾದಾಗ ಈ ಊರೆಗೋ[ಲ]ನ್ನು ನಿರ್ದಾಕ್ಷಿಣ್ಯವಾಗಿ ಕಿತ್ತುಕೊಳ್ಳುವ ಕಾನೂನನ್ನು ಸರ್ಕಾರ ಮಾಡಬೇಕು, ಅದನ್ನು ಕಟ್ಟುನಿಟ್ಟಾಗಿ ಜಾರಿಗೆ ಕೊಡಬೇಕು. ಆಗ ಆಗುವ ಬದಲಾವಣೆಯನ್ನು ನೋಡಿ.

ಕೆ. ಎಸ್. ಭಗವಾನ್,
ಮೈಸೂರು

## ಮಲ ತಿನ್ನುವುದು ನೆಲದ ಸಂಸ್ಕೃತಿಯೆ?

ಮಾನ್ಯರೆ,

ಬೆಂಡಿಗೇರಿಯಲ್ಲಿ, ನಂತರ ತತ್ತೂರಿನಲ್ಲಿ ನಡೆದ ಮಲ ತಿನ್ನಿಸುವ ಘಟನೆಗಳು ಕರ್ನಾಟಕದಲ್ಲಿ ನಡೆದ ಅತ್ಯಂತ ಹೇಯ ಕೃತ್ಯಗಳು, ನಾಗರೀಕ ಸಮಾಜ ನಾಚಿ ತಲೆತಗ್ಗಿಸುವಂತಹವು. ಇದು ಎಷ್ಟು ಅಮಾನವೀಯವಾದದ್ದು ಎಂದರೆ ತಲೆಯ ಮೇಲೆ ಮಲ ಹೊರಿಸುವ ನೀಚ ಸಂಸ್ಕೃತಿಯನ್ನೂ ನಾಚಿಸುವಂಥದ್ದು. ಈ ದೇಶದ ನೈತಿಕ ಭ್ರಷ್ಟತನ ಎಲ್ಲ ಕ್ಷೇತ್ರಗಳಲ್ಲೂ ಯಾವ ಮಟ್ಟಕ್ಕೆ ಹೋಗಿದೆ ಎಂದರೆ ಮಲ ತಿನ್ನುವುದು ಈ ನೆಲದ ಸಂಸ್ಕೃತಿಯೆ ಎನ್ನುವ ಅನುಮಾನಕ್ಕೆ ಅವಕಾಶ ಮಾಡಿದೆ.

ತತ್ತೂರಿನಲ್ಲಿ ದೇವರ ಪೂಜೆ ಮಾಡಿಸುವ ಹಿನ್ನೆಲೆಯಲ್ಲಿ ನಡೆದಿರುವ ಘಟನೆ ನಮ್ಮ ದೇವರು; ಧರ್ಮದ ಕಲ್ಪನೆಯನ್ನೇ ವಿಕಲ್ಪಗೊಳಿಸಿದೆ. ದೇವರು–ಧರ್ಮದ ಹೆಸರಿನಲ್ಲಿ ಮಾನವತೆಯನ್ನು ಕೊಂದು ಹರಡಿದ ರೋಗ ಉಲ್ಬಣಗೊಂಡಿರುವ ಸೂಚನೆ ಇದಾಗಿದೆ; ಇದು ಈ ದೇಶದ ಕರಾಳ ಭವಿಷ್ಯದ ಕುರುಹಾಗಿದೆ.

1987ನೇ ನವಂಬರ್ ಮೊದಲ ವಾರದಲ್ಲಿ ಪಶುಪತಿ ದೇವಸ್ಥಾನ ನೋಡಲಿಚ್ಛಿಸಿದ ಪ್ರಧಾನಿ ಪತ್ನಿ ಸೋನಿಯಾ ಗಾಂಧಿಗ

(3ನೇ ಪುಟಕ್ಕೆ)

## ಧರ್ಮದ ಶ್ರೇಷ್ಠ ಅಂಶಗಳ ಅನುಸರಣೆ ಸಾಕು

ಮಾನ್ಯರೆ,

ನಿಮ್ಮ 7 2 88ರ ಸಂಪಾದಕೀಯ ಬರಹ: 'ನಮ್ಮ ಸಹ ಮಾನವರಿಗೆ ಹೇಲು ತಿನ್ನಿಸುವ ನಮ್ಮ ಜಾತಿ ವ್ಯವಸ್ಥೆ' ಕೆಲವರಿಗೆ ಕಟುವಾಗಿ ಕಾಣಬಹುದಾದರೂ, ನೀವಂದಂತೆ 'ಆತ್ಮ'ವಿರುವವರೆಲ್ಲ ಸ್ವಲ್ಪವಾದರೂ ಆತ್ಮ ವಿಮರ್ಶೆ ಮಾಡಿಕೊಳ್ಳಲೇಬೇಕಾದ ಪ್ರಶ್ನೆಯನ್ನು ಮುಂದಿಟ್ಟಿದೆ.

ನಮ್ಮ ದೇಶ–ನಮ್ಮ ಸಮಾಜದ ಪಾಲಿಗೆ ಅತ್ಯಂತ ದುರಂತಮಯವಾದ ಇಂಥ ಘಟನೆ ನಡೆದಿರುವಾಗ, ಮಾಮೂಲಿನಂತೆ, ನಮ್ಮ ಮುಖಂಡರುಗಳೆಂಬ ಖದೀಮರು ಇದರ ಬಗ್ಗೆ ನಿಜವಾದ ವಿಚಾರ–ವಿಮರ್ಶೆ ನಡೆಯುವುದನ್ನು ದಾರಿ ತಪ್ಪಿಸಲು ಏನೆಲ್ಲ ಬಣ್ಣ ಕಟ್ಟತೊಡಗಿದ್ದಾರೆ—

'ಇದರಲ್ಲಿ ರಾಜಕೀಯವಿದೆ' ಎಂದರು. 'ಇದು ನಮ್ಮ ಪಕ್ಷದವರ ಕೃತ್ಯವಲ್ಲ. ಆ ಪಕ್ಷದ್ದು'; 'ಇಲ್ಲ ಅವರದ್ದೇ....' ಇತ್ಯಾದಿ ಹೇಳಿಕೆ–ಪ್ರತಿ ಹೇಳಿಕೆಗಳ 'ರಾಜಕೀಯ'ದಲ್ಲಿ;

'ಎಲ್ಲಾ ಸುಳ್ಳಂತೆ, ಕುಡಿದು ಬಂದು ಗಲಾಟೆ ಮಾಡಿದ್ದಕ್ಕೆ ತಲೆ ಮೇಲೆ ನೀರು ಸುರಿದರಂತೆ, ಅಷ್ಟೆ....'; 'ಈಗೇನು ಇವಕ್ಕೆ ಸೊಕ್ಕು ಮೀರಿ ಹೋಗಿದೆ, ದೇವಸ್ಥಾನ[ದ]ಲ್ಲೂ ಕುಡಿದು ಬಂದು ಗಲಾಟೆ ಮಾಡಿದರೆ ಇನ್ನೇನು ಮಾಡಬೇಕು?....' ಮುಂತಾದ 'ನ್ಯಾಯ' ಸಮರ್ಥನೆಯಲ್ಲಿ;

—ಮೂಲ ವಿಷಯವೇ ಮಸುಕಾಗಿ ಮ[ರೆ]ಯುತ್ತಿದೆ.

ಇಲ್ಲಿ ಮೂಲ ವಿಷಯ— ಆತ ಕುಡಿದು ಬಂದಿದ್ದನೋ ಇಲ್ಲವೋ ಎಂಬುದಲ್ಲ (ತಾನು ಕುಡಿದಿರಲಿಲ್ಲ ಎಂದು ಚಂದ್ರಪ್ಪ ಸ್ಪಷ್ಟಪಡಿಸಿದ್ದಾರೆ); ಕೃತ್ಯ ಎಸಗಿದವರು ಯಾವ ಪಕ್ಷದವರು ಅಥವಾ ಯಾವ ಜಾತಿಯವರು ಎಂಬುದೂ ಅಲ್ಲ.

ಒಂದು ಕಾಲದಲ್ಲಿ ಇಡೀ ಪ್ರಪಂಚಕ್ಕೆ [ಸ]ಸನ್ನಡತೆ, ಸನ್ಮಾರ್ಗ ಬೋಧಿಸಿದ ಈ ನಾಡಿನಲ್ಲಿ, ಇಂದು ಕೂಡ ಇಂಥದೊಂದು ಕೃತ್ಯ ನಡೆದಿದೆ— ಎಂಬುದೇ ಇಲ್ಲಿ ಮುಖ್ಯ. ಇದಕ್ಕೆ ಯಾವುದೇ ಒಂದು ಜಾತಿ, ಅಥವಾ ಚಂದ್ರಪ್ಪ ಎಸಗಿದ್ದಾನೆಂದು ಇವರು ಪ್ರಚಾರ ಮಾಡುತ್ತಿರುವ ಯಾವುದೋ ಒಂದು

(3ನೇ ಪುಟಕ್ಕೆ)

ಪದ್ಯದಂಕಣ

### ಬದುಕು

ತಿಳಿದಿಲ್ಲ ಗೊತ್ತು ಗುರಿ
ಹಬ್ಬಿಹುದು ಹಾದಿ
ಪಯಣಕ್ಕೆ ಬೇಕೇನು ಪಲ್ಲಕ್ಕಿ?
ಸಾಕೆನಗೆ–
ಕಿಗಿದೊಂದು ಬುತ್ತಿ.
ಹಸಿರೆಲೆಯ ಮರವಿರಲಿ ಅಲ್ಲಲ್ಲಿ
ನೆರಳೀಯಲು
ಎದುರಾಗಲಾಗಾಗ
ಕಿರು ತೊರೆಗಳು
ಹಾತೊರೆವ
ಹೆಬ್ಬಯಕೆ ಬರದಿರಲೆನಗೆ
ಸರಳತೆಯ
ವರವಿರಲಿ ಬಾಳ ನೆಲೆಗೆ

### ಚುಟುಕಗಳು

ಬರೆಯುವರು ಎಲ್ಲರೂ ಒಂದೊಂದು ಕವಿ[ತೆ]
ಬರೆಯಲೇಬೇಕೆಂದು ನಾನೂ ಸಹ ಕುಳಿತೆ
ಬರೆಬರೆದು ಮೂಡಿತದೋ ಸಾಲುಗಳ ಸಂ[ತೆ]
ಓದಿ ನೋಡಲು ಅರಿತೆ ನೈಜತೆಯ ಕೊರ[ತೆ]

* * *

ಬರಲಿದೆಯೆ ಇನ್ನೊಮ್ಮೆ ಮೂರನೆಯ
ಯುದ್ಧ
ಪ್ರಬಲ ರಾಷ್ಟ್ರಗಳೆಲ್ಲ ಅದಕೆ ಸದಾ ಸಿದ್ಧ
ಅಲಿಪ್ತ ದೇಶಗಳು ಶಾಂತಿ ಪ್ರಯತ್ನ
ಬಿಟ್ಟವಾದರೆ ಕೊನೆಗೆ ನಾವೆಲ್ಲಾ ಖತ್ನ

—ಕೆ.ಎಸ್. ವತ್ಸಲಾ ನಾಯ್ಕ್,
ಕಂಚಿನಕೆರೆ.

# ಮಲೆನಾಡಿನಲ್ಲಿ ಬಾಳೆಯ ಬೇಸಾಯ

ನಮ್ಮ ರಾಜ್ಯದಲ್ಲಿ ಬಾಳೆ ಬೆಳೆಯನ್ನು ಸುಮಾರು 36 ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದು. ಈ ಪೈಕಿ 9500 ಹೆಕ್ಟೇರ್ ಪ್ರದೇಶ ಮಲೆನಾಡಿನಲ್ಲಿದೆ. ಮಲೆನಾಡಿನಲ್ಲಿ ಬಾಳೆಯನ್ನು ಹೆಚ್ಚಾಗಿ ಕಾಫಿ ಮತ್ತು ಅಡಿಕೆ ತೋಟಗಳಲ್ಲಿ ಬೆಳೆಯುವುದು ರೂಢಿಯಲ್ಲಿದ್ದು ಇತ್ತೀಚಿನ ದಿನಗಳಲ್ಲಿ ಹೆಚ್ಚು ಪ್ರದೇಶದಲ್ಲಿ ಭತ್ತದ ಬದಲಾಗಿ ಬಾಳೆಯನ್ನು ಮುಖ್ಯ ಬೆಳೆಯಾಗಿ ಬೆಳೆಯುವುದು ಕಂಡು ಬರುತ್ತಿದೆ. ಮಲೆನಾಡು ವಲಯದಲ್ಲಿ ಉತ್ತಮ ಇಳುವರಿ ಪಡೆಯಲು ಅನುಸರಿಸಬೇಕಾದ ಬೇಸಾಯ ಕ್ರಮಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಹವಾಗುಣ, ಕಾಲ ಮತ್ತು ಮಣ್ಣು :** ಬಾಳೆಯು ಉಷ್ಣವಲಯದ ಬೆಳೆ. ತೇವಾಂಶದಿಂದ ಕೂಡಿದ ಹೆಚ್ಚಿನ ಉಷ್ಣಾಂಶವಿರುವ (10ರಿಂದ 40 ಡಿಗ್ರಿ ಸೆಂಟಿಗ್ರೇಡ್) ವಾತಾವರಣದಲ್ಲಿ ಹುಲುಸಾಗಿ ಬೆಳೆಯುತ್ತದೆ. ಬಾಳೆಯನ್ನು ಹೆಚ್ಚು ಮಳೆ ಬೀಳುವ, ಹೆಚ್ಚು ಉಷ್ಣಾಂಶವಿರುವ ಮಲೆನಾಡಿನಲ್ಲಿಯೂ ಬೆಳೆದು ಉತ್ತಮ ಇಳುವರಿ ಪಡೆಯಬಹುದು. ಬಯಲು ಸೀಮೆಯಲ್ಲಿ ಜೂನ್-ಜುಲೈ ತಿಂಗಳುಗಳು ನಾಟಿ ಮಾಡಲು ಸೂಕ್ತವಾದ ಕಾಲ. ಆದರೆ ಮಲೆನಾಡಿನಲ್ಲಿ ಜೂನ್ ತಿಂಗಳಿನಿಂದ ಆಗಸ್ಟ್ ತಿಂಗಳವರೆವಿಗೂ ಹೆಚ್ಚು ಮಳೆ ಬೀಳುವುದರಿಂದ ಮತ್ತು ಸೆಪ್ಟೆಂಬರ್-ಅಕ್ಟೋಬರ್ ತಿಂಗಳುಗಳಲ್ಲಿ ನಾಟಿ ಮಾಡಿದರೆ ನವೆಂಬರ್ ಡಿಸೆಂಬರ್ ತಿಂಗಳುಗಳಲ್ಲಿನ ಚಳಿಯ ಕಾರಣ ಬೆಳವಣಿಗೆ ಕುಂಠಿತಗೊಂಡು ಕಾಲಾವಧಿ ಎರಡು ಅಥವಾ ಮೂರು ತಿಂಗಳುಗಳು ಜಾಸ್ತಿ ಬೇಕಾಗುತ್ತದೆ. ಆದುದರಿಂದ ಮಲೆನಾಡಿನಲ್ಲಿ ಫೆಬ್ರವರಿ-ಮಾರ್ಚಿ ತಿಂಗಳುಗಳಲ್ಲಿ ನಾಟಿ ಮಾಡುವುದು ಉತ್ತಮ. ನೀರು ಬಸಿದು ಹೋಗುವಂತಹ, ಜೌಗು ಪ್ರದೇಶವಲ್ಲದ, 5ರಿಂದ 7 ರಸಸಾರ ಹೊಂದಿರುವ ಮೆಕ್ಕಲು ಅಥವಾ ಕಪ್ಪು ಗೋಡು ಮಣ್ಣು ಬಾಳೆ ಬೆಳೆಗೆ ಒಳ್ಳೆಯದು.

**ತಳಿಗಳ ಆಯ್ಕೆ :** ಬಾಳೆಯಲ್ಲಿ ಸಾಕಷ್ಟು ತಳಿಗಳಿದ್ದು ಮಲೆನಾಡಿನಲ್ಲಿ ಹೆಚ್ಚಾಗಿ ಕರಿಬಾಳೆ, ಪುಟ್ಟಬಾಳೆ, ನೇಂದ್ರಬಾಳೆಯನ್ನು ಕಾಫಿ ಮತ್ತು ಅಡಿಕೆ ತೋಟಗಳಲ್ಲಿ **ಮಿಶ್ರ ಬೆಳೆಯಾಗಿ** ಬೆಳೆಯುವುದು ವಾಡಿಕೆ. ಆದರೆ ಬಾಳೆಯನ್ನು **ಮುಖ್ಯ ಬೆಳೆಯಾಗಿ** ಬೆಳೆಯುವಾಗ ರೊಬಸ್ಟಾ ಮತ್ತು ಗಿಡ್ಡ ಕ್ಯಾವೆಂಡಿಷ್ ತಳಿಗಳನ್ನು ಬೆಳೆಯುವುದು ಒಳ್ಳೆಯದು. ರೊಬಸ್ಟಾ ತಳಿಯು ಹೆಚ್ಚು ಇಳುವರಿ ಕೊಡುತ್ತದೆ ಮತ್ತು 'ಪನಾಮ' ಎಲೆ-ಸೊರಗುವ ರೋಗವನ್ನು ತಡೆದುಕೊಳ್ಳುವ ಶಕ್ತಿ ಹೊಂದಿದೆ.

**ಕಂದುಗಳ ಆಯ್ಕೆ :** ಬಾಳೆಕಂದುಗಳನ್ನು 'ಕತ್ತಿ ಕಂದುಗಳು' ಮತ್ತು 'ನೀರು ಕಂದುಗಳು' ಎಂಬುದಾಗಿ ವಿಂಗಡಿಸಬಹುದು. ಕತ್ತಿ ಕಂದುಗಳಲ್ಲಿ ಎಲೆಗಳು ಕತ್ತಿಯಾಕಾರದಲ್ಲಿ ಉದ್ದಕ್ಕಿರುತ್ತವೆ ಮತ್ತು ದೃಢವಾಗಿರುತ್ತವೆ. ಇಂತಹ ಕಂದುಗಳು ಉತ್ತಮ ದರ್ಜೆಯ ಗೊನೆಗಳನ್ನು ಬಿಡುವುದರಿಂದ ಹೆಚ್ಚು ಇಳುವರಿ ಪಡೆಯಬಹುದು ಮತ್ತು ಬೇಗ ಫಸಲಿಗೆ ಬರುತ್ತವೆ. ನೀರು ಕಂದುಗಳಲ್ಲಿ ಪ್ರಾರಂಭದಲ್ಲೇ ಎಲೆಗಳು ಅಗಲವಾಗಿರುತ್ತವೆ. ಇದರಲ್ಲಿ ಫಸಲು ಬರುವುದು ತಡವಾಗುತ್ತದೆ ಮತ್ತು ಉತ್ತಮ ದರ್ಜೆಯ ಗೊನೆಗಳೂ ಸಿಗುವುದಿಲ್ಲ. ಆದಕಾರಣ ಯಾವಾಗಲೂ ಕತ್ತಿ ಕಂದುಗಳನ್ನೇ ಉಪಯೋಗಿಸುವುದು ಒಳ್ಳೆಯದು.

**ನಾಟಿ ಮಾಡುವ ವಿಧಾನ:** ಬಾಳೆ ಬೆಳೆಯಬೇಕೆಂದಿರುವ ಪ್ರದೇಶವನ್ನು ಎರಡು ಅಥವಾ ಮೂರು ಬಾರಿ ಚೆನ್ನಾಗಿ ಉಳುಮೆ ಮಾಡಿ ಸರಿಯಾದ ಅಂತರದಲ್ಲಿ ಒಂದೂವರೆ ಘನ ಅಡಿ ಇರುವ ಗುಣಿಗಳನ್ನು ತೆಗೆಯಬೇಕು. ಸರಿಯಾದ ಅಂತರವೆಂದರೆ, ಗಿಡ್ಡ ಕ್ಯಾವೆಂಡಿಷ್ ಹಾಗೂ ರೊಬಸ್ಟಾ ತಳಿಗಳಿಗೆ 6 ಅಡಿ $\times$ 6 ಅಡಿ ಮತ್ತು ಇತರ ತಳಿಗಳಿಗೆ 7 ಅಡಿ $\times$ 7 ಅಡಿ. ಹೀಗೆ ಗುಣಿಗಳನ್ನು ತೆಗೆದು ಸಮ ಪ್ರಮಾಣದಲ್ಲಿ ಬೆರೆಸಿದ ಕೊಟ್ಟಿಗೆ ಗೊಬ್ಬರ ಮತ್ತು ಮೇಲು ಮಣ್ಣಿನಿಂದ ಮುಕ್ಕಾಲು ಭಾಗ ತುಂಬಬೇಕು. ನಂತರ ಕತ್ತಿ ಕಂದುಗಳ ಹಳೆಯ ಬೇರುಗಳನ್ನು ತೆಗೆದು ಸ್ವಚ್ಛಮಾಡಿ ಸಗಣಿ ನೀರಿನಲ್ಲಿ ನೆನೆಸಿ, ಶೇ. 3ರ 10 ಗ್ರಾಂ ಕಾರ್ಬೋಫ್ಯೂರಾನ್ ಹರಳನ್ನು ಪ್ರತಿ ಗುಣಿಗೂ ಉದುರಿಸಿ, ಕಂದುಗಳನ್ನು ಗುಣಿಯ ಮಧ್ಯ ಭಾಗದಲ್ಲಿ ನಾಟಿ ಮಾಡಬೇಕು. ಮಣ್ಣು ಮತ್ತು ಹವಾಗುಣವನ್ನು ಅನುಸರಿಸಿ 4 ರಿಂದ 5 ದಿನಗಳಿಗೊಮ್ಮೆ ನೀರು ಹಾಯಿಸುವುದನ್ನು ಮುಂದುವರಿಸಬೇಕು.

**ಗೊಬ್ಬರಗಳ ಬಳಕೆ :** ಬಾಳೆಗೆ ಪ್ರತಿ ಗಿಡಕ್ಕೆ ಪ್ರತಿ ವರ್ಷಕ್ಕೆ 30 ಕೆ. ಜಿ. ಕೊಟ್ಟಿಗೆ ಗೊಬ್ಬರ, 180 ಗ್ರಾಂ ಸಾರಜನಕ (400 ಗ್ರಾಂ ಯೂರಿಯಾ ಅಥವಾ 900 ಗ್ರಾಂ ಅಮೋನಿಯಂ ಸಲ್ಫೇಟ್), 108 ಗ್ರಾಂ ರಂಜಕ (435 ಗ್ರಾಂ ರಾಕ್ ಫಾಸ್ಫೇಟ್ ಅಥವಾ 675 ಗ್ರಾಂ ಸೂಪರ್ ಫಾಸ್ಫೇಟ್) 225 ಗ್ರಾಂ ಪೊಟ್ಯಾಷ್ (370 ಗ್ರಾಂ ಮ್ಯೂರಿಯೇಟ್ ಆಫ್ ಪೊಟ್ಯಾಷ್) ಕೊಡಬೇಕು. ಈ ರಸ ಗೊಬ್ಬರಗಳನ್ನು ನಾಟಿಮಾಡಿದ 2, 4 ಮತ್ತು 6 ತಿಂಗಳುಗಳ ನಂತರ ಮೂರು ಸಮ ಕಂತುಗಳಲ್ಲಿ ಕೊಡಬೇಕು. ರಸಗೊಬ್ಬರಗಳನ್ನು ಗಿಡಗಳ ಸುತ್ತಲೂ ಕಂದಕದಲ್ಲಿ ಹಾಕಿ ಮಣ್ಣಿನಲ್ಲಿ ಬೆರೆಸಿ ಮುಚ್ಚಬೇಕು.

**ಮಧ್ಯಂತರ ಬೇಸಾಯ :** ಬಾಳೆ ನಾಟಿ ಮಾಡಿದ 3-4 ತಿಂಗಳುಗಳವರೆಗೆ

(4ನೇ ಪುಟಕ್ಕೆ)

# ಮಹಾನ್ ವಿಚಾರವಾದಿಗೆ ಸಂದ ಗೌರವ

ಮಾನ್ಯರೆ,

ಬೆಂಗಳೂರು ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿ, ಗಾಂಧೀವಾದಿ ಡಾ|| ಎಚ್. ನರಸಿಂಹಯ್ಯನವರು ಜೀವನದುದ್ದಕ್ಕೂ ಮೂಢ ನಂಬಿಕೆಗಳ ವಿರುದ್ಧ ಸಮರವನ್ನೇ ಹೂಡಿ ಏಕಾಂಗಿಯಾಗಿ ಸೆಣಸಿಕೊಂಡು ಬಂದಿದ್ದಾರೆ.

ಶೂನ್ಯದಿಂದ ವಸ್ತುಗಳನ್ನು ಸೃಷ್ಟಿಸುವ ಶಕ್ತಿ ಹೊಂದಿರುವರೆಂದೂ, ದೇವ ಮಾನವರೆಂದೂ ಪ್ರಖ್ಯಾತರಾದ ಸಾಯಿಬಾಬಾ ಅವರಿಗೆ "ವಾಚು, ಶಿವಲಿಂಗ ಬೇಡ. ಒಂದು ಕುಂಬಳಕಾಯಿಯನ್ನಾಗಲೀ ಅಥವಾ ಒಂದು ಕ್ರಿಕೆಟ್ ಬ್ಯಾಟನ್ನಾಗಲೀ ಸೃಷ್ಟಿಸಿ" ಎಂದು ಸವಾಲನ್ನು ಎಸೆದು ಸಾಯಿಬಾಬಾ ಅವರ 'ಶಕ್ತಿ'ಯ ಮಿತಿಯನ್ನು ಜಗತ್ತಿಗೆ ಬಿತ್ತರಿಸಿದ ಧೀಮಂತ!

ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅತೀಂದ್ರಿಯ ಶಕ್ತಿಗಳ ಬಗ್ಗೆ ವೈಜ್ಞಾನಿಕ ತನಿಖಾ ಸಮಿತಿಯನ್ನು ನೇಮಿಸಿ, ಪಾಂಡವಪುರದ ಸಾಯಿಕೃಷ್ಣನ ಬೂದಿ ಉದುರಿಸುವ ಪವಾಡದ ರಹಸ್ಯ ಬಯಲುಗೊಳಿಸಿ ಪ್ರಖ್ಯಾತ. ಅತೀಂದ್ರಿಯವಾದಿಗಳಿಗೆ ಇಂದೂ ನರಸಿಂಹಯ್ಯನವರ ಹೆಸರು ಕೇಳಿದರೆ 'ಎಳರ ನಡುಕ' ಬರುತ್ತದೆ.

ಮೂಢ ನಂಬಿಕೆಯ ಅಗಾಧ ಮರುಭೂಮಿಯಲ್ಲಿ ಡಾ|| ಪೆರಿಯಾರ್ ರಾಮಸ್ವಾಮಿ ನಾಯ್ಕರ್, ಡಾ|| ಕೋವೂರ್, ಡಾ|| ನರಸಿಂಹಯ್ಯ ಸದಾ ಚಿಮ್ಮುವ ವಿಚಾರವಾದದ ಚಿಲುಮೆಗಳು.

ಅಮೆರಿಕಾದಲ್ಲಿರುವ ಅತೀಂದ್ರಿಯ ಶಕ್ತಿಯ ಬಗೆಗಿನ ವೈಜ್ಞಾನಿಕ ತನಿಖಾ ಸಮಿತಿಯ 'ಫೆಲೋ' ಆಗಿ ಡಾ|| ಎಚ್. ನರಸಿಂಹಯ್ಯನವರು ಈಚೆಗೆ ಆಯ್ಕೆಯಾಗಿರುವುದು ಅವರ ವೈಜ್ಞಾನಿಕ ನಿಲುವಿಗೆ ಸಂದ ಮಹಾನ್ ಗೌರವವಾಗಿದೆ.

ಬೆಂಗಳೂರು —ಅ. ಕೊಟ್ರಪ್ಪ

("ಪ್ರಜಾವಾಣಿ"ಯಲ್ಲಿನ ಒಂದು ಪತ್ರ)

# ಧರ್ಮದ ಶ್ರೇಷ್ಠ ಅಂಶಗಳ ಅನುಸರಣೆ ಸಾಕು

(2ನೇ ಪುಟದಿಂದ)

ತಪ್ಪು ಕಾರಣವಲ್ಲ. (ಆ 'ತಪ್ಪು' ಮಾಡಿದ ದಲಿತರಲ್ಲದ ಇತರರಿಗೂ ಇದೇ ಶಿಕ್ಷೆ ಸಿಗುವುದಿಲ್ಲ ತಾನೆ?)

ಇದಕ್ಕೆ ಕಾರಣ— **ನಮ್ಮ ದೇಶದ ಎಲ್ಲರ ಎದೆಗಳೊಳಗೆ ಶತಮಾನಗಳಿಂದ ತುಂಬಿ ಹೆಪ್ಪಾಗಿರುವ ಜಾತಿ ವಿಷ, ಮೇಲು-ಕೀಳೆಂಬ ದೈವ ವಿರೋಧಿ, ಪ್ರಕೃತಿ-ವಿರೋಧಿ ಮನೋ ಜಾಡ್ಯ. ಆತ್ಮ ವಿಮರ್ಶೆ ಬೇಕಾಗಿರುವುದು ಇಲ್ಲಿ: ಈ ವಿಷ-ಈ ಜಾಡ್ಯವನ್ನು ಹೋಗಲಾಡಿಸುವುದಕ್ಕಾಗಿ.**

ಇನ್ನು, 'ನಮ್ಮ ಧರ್ಮಕ್ಕೆ ಒಂದಿಷ್ಟಾದರೂ ಶ್ರೇಷ್ಠತೆ ತಂದು ಕೊಡೋಣವೆ?' ಎಂದು ನೀವು ಬರೆದಿದ್ದೀರಿ. ನಿಜವಾಗಿ ನೋಡಿದರೆ, ನಮ್ಮ ಧರ್ಮಕ್ಕೆ ಆ ಶ್ರೇಷ್ಠತೆಯನ್ನು ಹೊಸದಾಗಿ ಎಲ್ಲಿಂದಲೋ ತಂದು ಕೊಡಬೇಕಾದ ಕಷ್ಟ ಕೂಡ ನಮಗಿಲ್ಲ. ಅಂಥ ಶ್ರೇಷ್ಠತೆ ಈಗಾಗಲೇ ನಮ್ಮ ಸಂಸ್ಕೃತಿ ಅಥವಾ 'ಧರ್ಮ'ದಲ್ಲಿ ಯಥೇಚ್ಛವಾಗಿ ಇದೆ.

ಅಷ್ಟೇ ಅಲ್ಲ, ಅಂಥ ಶ್ರೇಷ್ಠತೆಯ ಅಂಶಗಳು ಯಾವುವು, ನಿಕೃಷ್ಟತೆಗಳು ಯಾವುವು— ಎಂಬ ವಿಂಗಡಣೆಯನ್ನು ಕೂಡ ಸಮರ್ಥನಾಗಿ, ಸಾಧಾರವಾಗಿ ರಾಮಕೃಷ್ಣ, ವಿವೇಕಾನಂದ, ಬುದ್ಧ, ಗಾಂಧಿ, ಬಸವ, ಅಂಬೇಡ್ಕರರಂಥ ಈ ನಾಡಿನ ಎಷ್ಟೋ ಹಿರಿಯರು ಈಗಾಗಲೇ ಮಾಡಿಟ್ಟಿದ್ದಾರೆ, ಹಾಗೂ ಆಚರಿಸಿಯೂ ತೋರಿಸಿದ್ದಾರೆ. ನಾವು ಕೇವಲ ಅದರಲ್ಲಿ ಕೆಲವನ್ನಾದರೂ, ಕೆಲವೇ ಕೆಲವನ್ನಾದರೂ ಅನುಸರಿಸುವಷ್ಟು ಯೋಗ್ಯತೆ ಬೆಳೆಸಿಕೊಂಡರೂ ಸಾಕು, ಭಾರತ ಮತ್ತೊಮ್ಮೆ ವಿಶ್ವದಲ್ಲಿ ತಲೆಯೆತ್ತಿ ಮೆರೆದೀತು!

—**ಕೊಪ್ಪ ಗಣೇಶ ಪಟವರ್ಧನ್**

# ಅವರಂಗಳ ಗಂಗಳದಲ್ಲಲ್ಲ....

(2ನೇ ಪುಟದಿಂದ)

ಮುಚ್ಚಿಕೊಂಡು ಮೌನ ತಾಳಿರುವ ಹಿಂದೂ ಧರ್ಮದ ಮಠಾಧೀಶರು, ಧರ್ಮಾಧಿಕಾರಿಗಳನ್ನು ಕಂಡರೆ ದಲಿತರು. ಹಿಂದೂ ಧರ್ಮನಿರ್ಣಯರು ಎಸಗುತ್ತಿರುವ ಅಸಹ್ಯ ಕೃತ್ಯಗಳೆನ್ನೆಲ್ಲವನ್ನೂ ಸಹಿಸಿಕೊಂಡು ಹಿಂದೂ ಧರ್ಮದ ಜಾತಿ ಮಲದ ಹೊಂಡದಲ್ಲೇ ಬದುಕಬೇಕೆಂದು ಭಾವಿಸಿಕೊಂಡಿರುವಂತೆ ಕಾಣುತ್ತದೆ.......

ಇದು ಸಾಧ್ಯವೇ ?

—ಕೆಲ್ಲಯ್ಯ,

ಶಂಕರಪುರ, ಚಿಕ್ಕಮಗಳೂರು

(ಗಂಗಳ=ಊಟದ ತಟ್ಟೆ. —ಸಂ.)

# ಮಲ ತಿನ್ನುವುದು ನೆಲದ ಸಂಸ್ಕೃತಿಯೆ?

(2ನೇ ಪುಟದಿಂದ)

ಆಕೆ ಹಿಂದೂ ಅಲ್ಲ ಎಂದು ಪ್ರವೇಶ ನಿರಾಕರಿಸಿದ್ದು ಧರ್ಮಾಂಧತೆಯ ಪುನರಾವರ್ತನೆ, ಇದು ಧರ್ಮದ ಆಚರಣೆಯಲ್ಲ. ಧರ್ಮ, ದೇವರು, ದೇವಸ್ಥಾನಗಳು ಪಟ್ಟಭದ್ರ ಹಿತಾಸಕ್ತರ ಸ್ವಂತ ಆಸ್ತಿ ಎಂಬಂತೆ ಸಂಕುಚಿತಗೊಂಡು ಅವರ ದೃಷ್ಟಿಯೇ ವಿಕಲ್ಪ ಹೊಂದಿದೆ. ಬೆಂಡಿಗೇರಿ ತತ್ತ್ವದುಗಳಲ್ಲಿ ನಡೆದಿರುವುದು ಅಂತಹ ವಿಕಲ್ಪದ ಕುರುಹುಗಳು. ಇಂತಹ ವಿಕಲ್ಪಗಳಿಂದ ಮುಕ್ತರಾಗಿ ಮಾನವತೆಯನ್ನು ಮಾನ್ಯ ಮಾಡುವ ದೃಷ್ಟಿಯಲ್ಲಿ ದೇಶದ ಯುವಶಕ್ತಿ ಬೆಳೆಯಬೇಕಾಗಿದೆ. ಹಾಗೆ ಬೆಳೆದಾಗ ಮಾತ್ರ ಈ ಇಡೀ ದೇಶಕ್ಕೆ ಮುಕ್ತಿ.

ಇಂತಹ ಅಮಾನವೀಯ ಕೃತ್ಯ ಎಸಗುವವರು ಯಾರೇ ಆಗಿರಲಿ, ಜಂಘಮರೇ, ಎಲ್ಲ ಕುಣಿಕೆಯನ್ನೂ ಮೀರಿ ಕಠಿಣ ಶಿಕ್ಷೆಗೆ ಗುರಿಪಡಿಸದ ಹೊರತು, ಇಲ್ಲಿ ನಾವು ಮನುಷ್ಯರು ಎಂಬ ಪ್ರಜ್ಞಾಪೂರ್ವಕ ಅರಿವು ಮೂಡುವುದಿಲ್ಲ. ಅದು ಮೂಡದ ಹೊರತು ನಾಗರೀಕ ಸಮಾಜ ನಿರ್ಮಾಣ ಆಗುವುದಿಲ್ಲ. ಇದು ಅರಿವ ತನಕ ನಮ್ಮ ಮಲ ತಿನ್ನಲು ಬೊಗಳೆ ಸಂಸ್ಕೃತಿಯಾಗುತ್ತದೆ.

—ಜ. ಹೊ. ನಾರಾಯಣ ಸ್ವಾಮಿ

ಪಕೀಲಮ್ಮ, ಹಾಸನ

# ಮಲೆನಾಡಿನಲ್ಲಿ ಬಾಳೆಯ ಬೇಸಾಯ

(3ನೇ ಪುಟದಿಂದ)

ಅಲ್ಪಾವಧಿ ಬೆಳೆಗಳಾದ ಮೂಲಂಗಿ, ಬೆಂಡೆ, ಗೆಡ್ಡೆಕೋಸು, ಅಲಸಂದೆ, ಸೊಪ್ಪಿನ ತರಕಾರಿಗಳು ಮತ್ತು ತಿಂಗಳ ಹುರುಳಿ ಬೆಳೆಗಳನ್ನು ಮಿಶ್ರಬೆಳೆಯಾಗಿ ಬೆಳೆಯಬಹುದು. ಬೆಳೆಯಿಟ್ಟ ಪ್ರದೇಶದಲ್ಲಿ ಕಳೆಗಳನ್ನು ನಿಯಂತ್ರಿಸಲು 2-3 ಸಲ ಕಳೆ ತಗೆಯಬೇಕು. ನಾಟಿಮಾಡಿದ ಒಂದೂವರೆ ತಿಂಗಳ ನಂತರ ಮರಿ ಕಂದುಗಳು ಬರಲು ಪ್ರಾರಂಭವಾಗುತ್ತವೆ. ಈ ಕಂದುಗಳನ್ನು ಕತ್ತಿಯಿಂದ ಕತ್ತರಿಸಿ, ಕತ್ತರಿಸಿದ ಭಾಗಕ್ಕೆ ಸೀಮೆ ಎಣ್ಣೆಯನ್ನು ಹಾಕುವುದರಿಂದ ಮರಿ ಕಂದುಗಳು ಬರುವ ಅವಧಿ ಜಾಸ್ತಿಯಾಗುತ್ತದೆ. ಗೊನೆ ಬರಲು ಪ್ರಾರಂಭವಾದ ನಂತರ ಒಂದು ಮರಿ ಕಂದನ್ನು ಎರಡನೇ ಬೆಳೆಗೆ ಬಿಡಬೇಕು.

**ಸಸಿ ಸಂರಕ್ಷಣೆ :** ಬಾಳೆಗೆ ಹಾನಿಯುಂಟು ಮಾಡುವ ಕೀಟಗಳು ಹಾಗೂ ರೋಗಗಳಲ್ಲಿ ಬಾಳೆಮೂತಿ ಹುಳು, ಪನಾಮ ಎಲೆ ಹಳದಿ ರೋಗ, ದುಂಡು ಜಂತು ರೋಗ, ಬಂಚಿಟಾಪ್ ನಂಜು ರೋಗ ಮತ್ತು ಎಲೆ ಚುಕ್ಕೆರೋಗ ಮುಖ್ಯವಾದುವುಗಳು.

ಮೂತಿಹುಳುವನ್ನು ನಿಯಂತ್ರಿಸಲು ತೋಟಗಳನ್ನು ಸ್ವಚ್ಛವಾಗಿಡುವುದು, ಕೀಟದ ಹಾವಳಿಗೆ ತುತ್ತಾಗಿರದ ಕಂದುಗಳನ್ನೇ ಆರಿಸಿ ನಾಟಿ ಮಾಡುವುದು ಮತ್ತು ಕಂದುಗಳನ್ನು ನೆಡುವ ಗುಂಡಿಗೆ ಶೇ. 3ರ ಕಾರ್ಬೊಫ್ಯೂರಾನ್ ಅಥವಾ 5 ಗ್ರಾಂ ಫೋರೇಟ್ ಹರಳುಗಳನ್ನು ಹಾಕಿ ಮುಚ್ಚುವ ಕ್ರಮಗಳನ್ನು ಕೈಗೊಳ್ಳಬೇಕು. ರೋಗ ಹತೋಟಿ ಕ್ರಮಗಳಲ್ಲಿ, ರೋಗ ರಹಿತ ಕಂದುಗಳನ್ನು ಆರಿಸಿ ನಾಟಿ ಮಾಡುವುದು, ರೋಗ ತಡೆದುಕೊಳ್ಳಬಲ್ಲ ತಳಿಗಳನ್ನೇ ಉಪಯೋಗಿಸುವುದು ಮತ್ತು ನಂಜು ರೋಗ ಪೀಡಿತ ಗಿಡಗಳನ್ನು ಗೆಡ್ಡೆ ಸಮೇತ ಕಿತ್ತು ನಾಶ ಪಡಿಸುವುದು ಮುಖ್ಯವಾದುವುಗಳು.

ಎಲೆಚುಕ್ಕೆರೋಗ ನಿಯಂತ್ರಿಸಲು 30 ಗ್ರಾಂ ಕಾಪರ್ ಆಕ್ಸಿ ಕ್ಲೋರೈಡ್ ಅಥವಾ 10 ಗ್ರಾಂ ಕಾರ್ಬನ್ ಡೈಜಿಮ್ ರೋಗ ನಾಶಕಗಳನ್ನು 10 ಲೀಟರ್ ನೀರಿನಲ್ಲಿ ಕರಗಿಸಿ ಸಿಂಪಡಿಸಬೇಕು.

**ಇಳುವರಿ :** ಕಂದುಗಳನ್ನು ನಾಟಿ ಮಾಡಿದ 12 ರಿಂದ 14 ತಿಂಗಳುಗಳಲ್ಲಿ ಗೊನೆಗಳು ಕೊಯ್ಲಿಗೆ ಸಿದ್ಧವಾಗುತ್ತವೆ ಒಂದು ಎಕರೆಗೆ ಗಿಡ್ಡ ಕ್ಯಾವೆಂಡಿಶ್ ತಳಿಯಿಂದ 12ರಿಂದ 16 ಟನ್, ರೊಬಸ್ಟಾ ತಳಿಯಿಂದ 15ರಿಂದ 18 ಟನ್ ಮತ್ತು ಇತರ ತಳಿಗಳಿಂದ 8ರಿಂದ 12 ಟನ್ ಇಳುವರಿ ಪಡೆಯ ಬಹುದಲ್ಲದೆ ನಾಟಿ ಮಾಡಲು ಕಂದುಗಳನ್ನು ಮಾರಾಟ ಮಾಡುವುದರಿಂದ ಹೆಚ್ಚಿನ ಆದಾಯ ಗಳಿಸಬಹುದು.

**ಸಿ. ಸೋಮಶೇಖರ್,**
**ಎನ್. ಎಸ್. ಶಿವಲಿಂಗೇಗೌಡ**
**ಮತ್ತು ಸಿ. ಕೆ. ಬಾಲಚಂದ್ರ.**
ಪ್ರಾದೇಶಿಕ ಸಂಶೋಧನಾ ಕೇಂದ್ರ,
ಮೂಡಿಗೆರೆ

**ಚಂದಾ ಹಣ ಕಳಿಸಿ ಸಹಕರಿಸಿ**
**ವಾರ್ಷಿಕ ಚಂದಾ 25 ರೂ.**



## ನಿಲುವಾಗಿಲು ಮಂಡಲ ಪಂಚಾಯಿತಿ

ನಿಲುವಾಗಿಲು - 577 120

**ಕೊಪ್ಪ ತಾಲ್ಲೂಕು :: ಚಿಕ್ಕಮಗಳೂರು ಜಿಲ್ಲೆ**

ಆಧಾರ ಸಂಖ್ಯೆ 71/87-88 ದಿನಾಂಕ : 12-2-1988

# ಅಂಗಡಿ ಮಳಿಗೆಗಳ ಹರಾಜು ಪ್ರಕಟಣೆ

ನಿಲುವಾಗಿಲು ಮಂಡಲ ಪಂಚಾಯಿತಿಗೆ ಸೇರಿದ ಬಿಲಗದ್ದೆ ಗ್ರಾಮದಲ್ಲಿರುವ 2 ಅಂಗಡಿ ಮಳಿಗೆ, ಕಾಳನಾಯಕನಕಟ್ಟೆಯಲ್ಲಿರುವ ಒಂದು ಅಂಗಡಿ ಮಳಿಗೆ, ನಿಲುವಾಗಿಲಿನಲ್ಲಿರುವ 4 ಅಂಗಡಿ ಮಳಿಗೆಗಳು, ಶಾನುವಳ್ಳಿಯಲ್ಲಿರುವ ಒಂದು ಅಂಗಡಿ ಮಳಿಗೆ, ಮಾವಿನಕಟ್ಟೆ-ಕೈಮರದಲ್ಲಿರುವ (ಕೋಡೂರು) ಒಂದು ಅಂಗಡಿ ಮಳಿಗೆ ಮತ್ತು ಒಂದು ಹೋಟೆಲ್‌ಗಳನ್ನು 1988-89ನೇ ಸಾಲಿಗೆ ಬಹಿರಂಗ ಹರಾಜ್ ಮೂಲಕ ವಿಲೇವಾರಿ ಮಾಡಲು ನಿರ್ಧರಿಸಿದ್ದು, ನಿಲುವಾಗಿಲು ಮಂಡಲ ಪಂಚಾಯ್ತಿ ಕಛೇರಿಯ ಆವರಣದಲ್ಲಿ ದಿನಾಂಕ 10-3-1988ರ ಬೆಳಗ್ಗೆ 10-00 ಗಂಟೆಗೆ ಪ್ರಧಾನರ, ಉಪಪ್ರಧಾನರ ಹಾಗೂ ಸದಸ್ಯರ ಸಮಕ್ಷಮ ಹರಾಜು ನಡೆಸಲು ಏರ್ಪಡಿಸಲಾಗಿದೆ. ಇಷ್ಟವುಳ್ಳ ಬಿಡ್ಡುದಾರರು ಮುಂಗಡವಾಗಿ 200-00 ರೂಪಾಯಿ ಠೇವಣಿ ಹಣವನ್ನು ಪಾವತಿಸಿ, ರಸೀತಿ ಪಡೆದು ಈ ಬಿಡ್ಡಿನಲ್ಲಿ ಭಾಗವಹಿಸಬಹುದೆಂದು ಪ್ರಚುರಪಡಿಸಿದೆ.

**ವಿ. ಸೂ.** — ಈ ಬಗ್ಗೆ ಹೆಚ್ಚಿನ ವಿವರಗಳನ್ನು ಮಂಡಲದ ಕಾರ್ಯದರ್ಶಿಯವರಿಂದ ಪಡೆಯಬಹುದು.

**ಎಚ್. ಡಿ. ಕೊಮಾರಯ್ಯ,** ಕಾರ್ಯದರ್ಶಿ,
ಎಚ್. ಎಂ. ಕೃಷ್ಣಮೂರ್ತಿ, ಪ್ರಧಾನರು,
ನಿಲುವಾಗಿಲು ಮಂಡಲ ಪಂಚಾಯ್ತಿ.



**ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಿಕೆ ಅಚ್ಚು ಕೂಟ, ಕೊಪ್ಪ**